SHRI RAMTATVA

KANNADA-ENGLISH

# TRANSLATION SERIES

## BOOK II

ಕನ್ನಡ-ಇಂಗ್ಲಿಷ

# ಭಾಷಾಂತರ ಪಾಠಮಾಲೆ

ಎರಡನೇ ಪುಸ್ತಕ





*PUBLISHED BY*

**GOVINDARAO ABAJIRAO SAVANT, BELGAUM.**



19693 ] • [ Price 1—50

*The Department of Public Instructions, Bombay.*

# KANNADA-ENGLISH TRANSLATION SERIES

## BOOK II

BY

*Late* SANGAPPA MALLAPPA ANKLE,

*Deputy Educational Inspector, Bijapur.*

EIGHTEENTH EDITION 2000 COPIES.

1969.





PUBLISHED BY

**Govindrao Abajirao Savant, Belgaum.**

# ಪೀಠಿಕೆ—PREFACE.

ಭಾಷಾಂತರಪಾಠಮಾಲೆಯ ಮೊದಲನೇ ಪುಸ್ತಕದಂತೆ ಎರಡನೇ ಪುಸ್ತಕವನ್ನು ಬರೆಯಲಾಗಿದೆ. ಇದರೊಳಗೆ ಸಹ ಪ್ರತಿಯೊಂದು ಪಾಠದ ಆರಂಭದಲ್ಲಿ ವ್ಯಾಕರಣದ ಒಂದೆರಡು ನಿಯಮಗಳು, ಬಳಿಕ ಇಂಗ್ಲಿಷ ವಾಕ್ಯದ ಮಾದರಿ, ಆ ಮೇಲೆ ಹಲವು ಶಬ್ದಗಳ ಸಂಗ್ರಹ, ಕೊನೆಗೆ ಭಾಷಾಂತರ ಮಾಡುವದಕ್ಕಾಗಿ ಕೆಲವು ಇಂಗ್ಲಿಷ, ಕೆಲವು ಕನ್ನಡ ವಾಕ್ಯಗಳು ಮುಂತಾದ ಕ್ರಮವೆಲ್ಲ ಆದರಂತೆಯೇ ಇಡಲ್ಪಟ್ಟಿದೆ. ಈ ಮೇರೆಗೆ ಇದರೊಳಗೆ ೨೬ ಪಾಠಗಳುಂಟು; ಮತ್ತು ಶಬ್ದಸಂಗ್ರಹದೊಳಗೆ ಒಟ್ಟಿಗೆ ಸುಮಾರು ಏಳೆಂಟುನೂರು ಶಬ್ದಗಳಿರಬಹುದು. ವ್ಯಾಕರಣದ ಆಧಾರವಾಗಿ ಈ ಪುಸ್ತಕದೊಳಗೆ ನಿಷೇಧಾರ್ಥಕವಾಕ್ಯಗಳು, ಪ್ರಶ್ನಾರ್ಥಕವಾಕ್ಯಗಳು, ವಿಶೇಷಣ, ಕ್ರಿಯಾವಿಶೇಷಣ ಗಳ ತಾರತಮ್ಯಭಾವ–strong ಮತ್ತು weak conjugation, ಉಪಸರ್ಗಾ ವ್ಯಯಗಳು, ಪ್ರಯೋಗಗಳು. ವಿಧ್ಯರ್ಥ, ಪೂರ್ಣವರ್ತಮಾನಕಾಲ, there, self (ಸ್ವತಃ) ಇವುಗಳ ಭಾಷಾಂತರ ಮುಂತಾದ ವಿಷಯಗಳ ಬಗ್ಗೆ ಸ್ವಲ್ಪ ಸ್ವಲ್ಪ ವಿವರಿಸಿದ್ದೇವೆ. ಈ ಪುಸ್ತಕದ ಕೊನೆಗೆ ಪುರವಣಿ ಜೋಡಿಸಿರುತ್ತದೆ. ಅದರಲ್ಲಿ ಮೂರು ಭಾಗಗಳುಂಟು. ಮೊದಲನೆ ಭಾಗದಲ್ಲಿ ಇಂಗ್ಲಿಷ ವ್ಯಾಕರಣದೊಳಗಿನ ಶಬ್ದಖಂಡವು ಸಂಕ್ಷಿಪ್ತ ರೀತಿಯಿಂದ ವಿವರಿಸಲ್ಪಟ್ಟಿದೆ. ಈ ಭಾಗವು ಮುಖ್ಯವಾಗಿ ಮೊದಲನೆಯ ಹಾಗೂ ಎರಡನೆಯ ಪುಸ್ತಕಗಳಲ್ಲಿ ಕಲಿತುದೆಲ್ಲ ವ್ಯಾಕರಣ ದೃಷ್ಟಿಯಿಂದ ಹುಡುಗರ ಲಕ್ಷ್ಯದಲ್ಲಿ ಬರಬೇಕೆಂತಲೂ, ಅವರಿಗೆ ಅದರ ಪುನರಾವೃತ್ತಿ ಒಮ್ಮೆಲೇ ಮಾಡಲಿಕ್ಕೆ ಸುಲಭವಾಗಬೇಕೆಂತಲೂ ನಾಮ, ಸರ್ವನಾಮ, ಕ್ರಿಯಾಪದಗಳನ್ನು ಕ್ರಮದಿಂದ ನಡಿಸಲಿಕ್ಕೆ ಬರಬೇಕೆಂತಲೂ ಮಾಡಲ್ಪಟ್ಟಿದೆ. ಇದರೊಳಗೆ ಪುಸ್ತಕದಲ್ಲಿ ಬಾರದೆ ಇದ್ದ ಅಲ್ಪ ಸ್ವಲ್ಪ ಉಪಯುಕ್ತ ವಿಷಯಗಳನ್ನು ಸಹ ಕಾಣಬಹುದು. ಎರಡನೇ ಭಾಗದಲ್ಲಿ ಎರಡೂ ಪುಸ್ತಕಗಳೊಳಗೆ ಬಂದ ಕೆಲವು ಭಾಷಾ ಪದ್ಧತಿಗಳನ್ನು ಒತ್ತಟ್ಟಿಗೆ ತಂದು ಸ್ಪಷ್ಟ ಮಾಡಿ ತೋರಿಸಿ ಇವೆ. ಮೂರನೇ ಭಾಗದಲ್ಲಿ ಸುಮಾರು ತೊಂಬತ್ತು ಪ್ರಶ್ನೆಗಳು ಕೊಡಲ್ಪಟ್ಟವೆ. ಅವುಗಳನ್ನು ಶಿಕ್ಷಕರು ಬೇಕಾದಷ್ಟು ಬೆಳಿಸಬಹುದು.

ಮೊದಲನೇ ಪುಸ್ತಕದಂತೆ ಇದಾದರೂ ಮರಾಠೀ ಭಾಷಾಂತರಪಾಠಮಾಲಾ ಪುಸ್ತಕ ೧, ಭಾಗ ೨ ನೇದರ ಭಾಷಾಂತರವಿದ್ದಾಗ್ಯೂ, ಕನ್ನಡ ಭಾಷಾ ಪದ್ಧತಿಗೂ ಬೇರೆ ಕೆಲವು ಸಂಗತಿಗಳಿಗೂ ಅನುಸರಿಸಿ ಎಷ್ಟೋ ಕಡೆಯಲ್ಲಿ ಹೆಚ್ಚು ಕಡಿಮೆ ಮಾಡಿ, ನಮ್ಮ ಕರ್ನಾಟಕಸ್ಥರ ಸಲುವಾಗಿ ಈ ಪುಸ್ತಕವು ಬರೆಯಲ್ಪಟ್ಟಿದೆ. ಇದರ ಸಂಬಂಧದಿಂದಾದರೂ ಬೆಳಗಾವಿ ಹೈಸ್ಕೂಲದ ಹೆಡ್‌ಮಾಸ್ತರರಾದ ಮೆಹರ್ಬಾನ ಹುಗವರ್ಥ ದೊರೆಗಳು ಕೆಲವು ಉಪಯುಕ್ತವಾದ ಸೂಚನೆಗಳನ್ನು ಮಾಡಿದ್ದರಿಂದಲೂ, ಕನ್ನಡ ವ್ಹರ್ನ್ಯಾಕ್ಯುಲರ ಕಮಿಟಿಯವರು ಈ ಪುಸ್ತಕದ ಬಗ್ಗೆ ತಮ್ಮ ಸಮ್ಮತಿಯನ್ನು ಕೊಡುವಾಗ ಹಲವು ಸೂಚನೆಗಳನ್ನು ಮಾಡಿದ್ದರಿಂದಲೂ, ಗ್ರಂಥ ಕರ್ತನು ಅವರ ಉಪಕಾರ ಸ್ಮರಿಸುತ್ತಾನೆ.

ಸಂ. ಮು. ಅಂಕಲಿ.

# ಮುನ್ನುಡಿ.

ಈ ಆವೃತ್ತಿಯಲ್ಲಿ ಹಿಂದಿನ ಆವೃತ್ತಿಯೊಳಗಿನ ತಪ್ಪುಗಳನ್ನು ತಿದ್ದಿ, ಅನಾವಶ್ಯಕವಾದ ಟಿಪ್ಪಣಿ ತೆಗೆದುಹಾಕಿ ಕೆಲವು ಕಡೆಯಲ್ಲಿ ಸಮಾನಾದ ಅರ್ಥವುಳ್ಳ ಶಬ್ದಗಳಲ್ಲಿರುವ ನಿಜವಾದ ಭೇದವನ್ನು ಕುರಿತು ಟಿಪ್ಪಣಿಗಳನ್ನು ಹೆಚ್ಚಿಗೆ ಕೊಟ್ಟಿದೆ. ಶಬ್ದ ಸಂಗ್ರಹದೊಳಗಿನ ಶಬ್ದಗಳಿಗೆ ಒಂದಕ್ಕಿಂತ ಹೆಚ್ಚು ಅರ್ಥಗಳಿದ್ದಲ್ಲಿ ಅವುಗಳ ಹಿಂದೆ ಸಣ್ಣ ಅಂಕಿ ಹಾಕಿ, ಭಿನ್ನವಾದ ಅರ್ಥಗಳನ್ನು ವಿಂಗಡಿಸಿ ತೋರಿಸಿರುತ್ತದೆ ಮತ್ತು ಅಲ್ಲಲ್ಲಿ ಕೆಲವು ಹೆಚ್ಚುಕಡಿಮೆಗಳನ್ನು ಮಾಡಿದೆ. ಹೀಗೆ ವಿದ್ಯಾರ್ಥಿಗಳಿಗೆ ಚನ್ನಾಗಿ ಸಹಾಯವಾಗುವಂತೆ ಕೈಲಾದಮಟ್ಟಿಗೆ ಪ್ರಯತ್ನಮಾಡಿದೆ.

ಈ ಅಂಕಲೇಕೃತ ಭಾಷಾಂತರ ಪಾಠಮಾಲೆಯಲ್ಲಿ ಉತ್ತರ ಕರ್ನಾಟಕದಲ್ಲಿ ಬಳಿಕೆಯಲ್ಲಿದ್ದ ಕೆಲ ಶಬ್ದಗಳ ಅರ್ಥವು ವಿಶಾಲ ಮೈಸೂರಿನ ಎಲ್ಲ ಭಾಗಗಳಲ್ಲಿಯ ಜನಸಾಮಾನ್ಯಕ್ಕೆ ಸುಲಭವಾಗಿ ಆಗುವದಿಲ್ಲವಾಗಿ ಕೆಲ ಓದುಗರು ಸೂಚಿಸಿರುವದರಿಂದ ಈ ಪರಿಷ್ಕೃತ ಪ್ರತಿಗಳಲ್ಲಿ ಅವಶ್ಯವಿದ್ದಲ್ಲಿ ಕೆಲ ತಿದ್ದುಪಡೆ ಮಾಡಲಾಗಿದೆ. ಮೂಲ ಪ್ರತಿಗಳಲ್ಲಿಯ ವ್ಯಾಕರಣ ಭಾಗದಲ್ಲಿ ಯಾವ ಬದಲಾವಣೆ-ತಿದ್ದುಪಡೆ ಮಾಡುವ ಆವಶ್ಯಕತೆ ಇನ್ನೂ ಉಂಟಾಗದೆ ಇರುವದರಿಂದ ಯಾವ ತಿದ್ದುಪಡಿಯನ್ನೂ ಮಾಡಿಲ್ಲ. ವರ್ತಮಾನ ಪತ್ರ-ಮಾಸಿಕಗಳಲ್ಲಿ ಮೇಲಿಂದ ಮೇಲೆ ಇಂಗ್ಲೀಷಿನ ಬಗೆಗೆ ಪ್ರಕಟವಾಗುತ್ತಿರುವ ಲೇಖಗಳಿಂದ ಓದುಗರನೇಕರಿಗೆ ವಿಶೇಷತಃ ಶಿಕ್ಷಕ ಬಂಧುಗಳಿಗೆ ಇಂಗ್ಲೀಷಿನ ಭವಿತವ್ಯದ-ಅಸ್ತಿತ್ವದ ಬಗ್ಗೆ ಅನುಮಾನ ಉಂಟಾಗುವದರಿಂದ ಆ ಬಗ್ಗೆ ತಜ್ಞರ ಸ್ಪಷ್ಟ ಮತವೇನಿರುವದೆಂಬದನ್ನು ಸಹ ಓದುಗರೆದುರಿಗೆ ಇಡಬೇಕೆಂಬುದಾಗಿ ಸೂಚನೆ ಬಂದುದರಿಂದ ಮುನ್ನುಡಿಯಲ್ಲಿ ಈ ಅಂಶದ ಬಗ್ಗೆ ಕೆಲ ಮಾತುಗಳನ್ನು ಹೇಳಲಾಗಿದೆ. ಶಿಕ್ಷಕ ಬಂಧುಗಳನೇಕರು ಇಂಗ್ಲೀಷನ್ನು ಪ್ರಾಥಮಿಕ ಶಾಲೆಯ ಎಳೆ ಮಕ್ಕಳಿಗೆ ಸುಲಭವಾಗಿ ಪರಿಣಾಮಕಾರಕವಾಗಿ ಕಲಿಸುವ ಆಧುನಿಕ ಪದ್ಧತಿಗಳ ಬಗ್ಗೆ ಕೆಲ ಸೂಚನೆಗಳನ್ನು ಮುನ್ನುಡಿಯಲ್ಲಿ ಕೊಡಬೇಕೆಂದು ಸೂಚಿಸಿರುವದರಿಂದ ಆ ಬಗ್ಗೆ ಕೆಲ ಸೂಚನೆಗಳನ್ನು ಕೊಟ್ಟಿದೆ. ಈಗಾಗಲೇ ಮೈಸೂರ ವಿದ್ಯಾ ಇಲಾಖೆಯವರು ಪ್ರಾಥಮಿಕ ಶಾಲೆಯ V, VI ಮತ್ತು VII ನೆಯ ತರಗತಿಯ ಮಕ್ಕಳಿಗೆ ಇಂಗ್ಲೀಷ ಕಲಿಸುವ ಬಗ್ಗೆ ಶಿಕ್ಷಕ ಬಂಧುಗಳಿಗೆ ಮಾರ್ಗದರ್ಶಕ ಗ್ರಂಥವೊಂದನ್ನು ವಿದ್ವಾಂಸರಿಂದ ಬರೆಯಿಸಿ, ಎಲ್ಲ ಶಾಲೆಗಳಿಗೆ ಅವನ್ನು ಪೂರೈಸಿದ್ದಾರೆ. (Vide Teachers' Guide Book English Language) ಅದರಲ್ಲಿ ಇಂಗ್ಲೀಷ ಭಾಷೆಯನ್ನು ಕಲಿಸುವಲ್ಲಿ ಬಳಿಕೆಯಲ್ಲಿದ್ದ ಅತ್ಯಾಧುನಿಕ ಪದ್ಧತಿಗಳ ಬಗ್ಗೆ ವಿಸ್ತೃತವಾಗಿ ಸಾಕಷ್ಟು ಮಾರ್ಗದರ್ಶನವನ್ನು ಮಾಡಲಾಗಿದೆ. ಈಬಗ್ಗೆ ಸಹ ಕೆಲ ಸಾಮಾನ್ಯ ಮಾತುಗಳನ್ನು ಹೇಳಲಾಗಿದೆ.

ಮೂಲ ಪ್ರತಿಗಳಲ್ಲಿ ಭಾಷಾಂತರಕ್ಕಾಗಿ ಕೊಟ್ಟ ಕೆಲ ಮಾತುಗಳು ಸ್ವತಂತ್ರ ಭಾರತದ ಗೌರವಕ್ಕೆ, ಸ್ವಾಭಿಮಾನಕ್ಕೆ ಧಕ್ಕೆ ತರುವಂತಹವಿದ್ದುದರಿಂದ ಅವನ್ನು ತೆಗೆದು ಹಾಕಲಾಗಿದೆ. ಮೂಲ ಪ್ರತಿಗಳಲ್ಲಿಯ ಮುದ್ರಣ ದೋಷಗಳ (Printers' mistakes) ನ್ನು ಸಹ ತಿದ್ದಲಾಗಿದೆ. ಕಣ್ಣು ತಪ್ಪಿ ಇನ್ನೂ ಕೆಲ ತಪ್ಪುಗಳಿರಬಹುದು ಮಹನೀಯರು ಅವುಗಳನ್ನು ಪ್ರಕಾಶಕರ ಗಮನಕ್ಕೆ ತಂದುದಾದರೆ ಅವನ್ನು ಶೀಘ್ರವಾಗಿ ತಿದ್ದುವದಲ್ಲದೆ, ತಪ್ಪುಗಳನ್ನು ತೋರಿಸಿಕೊಟ್ಟ ಬಗ್ಗೆ ಕೃತಜ್ಞತೆ ವ್ಯಕ್ತ ಮಾಡಲಾಗುವದು.

ಶಿಕ್ಷಕ ಬಂಧುಗಳೂ ಶಿಕ್ಷಣಾಭಿಮಾನಿಗಳಾದ ನಾಗರಿಕರೂ ಈ ಮೊದಲು ಈ ಪುಸ್ತಕ ಮಾಲೆಗೆ ಉತ್ತೇಜನವಿತ್ತಂತೆ ಈ ಪರಿಷ್ಕೃತ ಮಾಲೆಗೂ ಉತ್ತೇಜನ ಕೊಡಬೇಕಾಗಿ ಆಗ್ರಹದ ವಿನಂತಿ.

ಆಂಗ್ಲ ಭಾಷೆಯು ನಮ್ಮ ಜೀವನದ-ಸಂಸ್ಕೃತಿಯ ಹಾಸು ಹೊಕ್ಕಾಗಿ ಇನ್ನೂ ಎಷ್ಟು ಕಾಲ ಉಳಿಯಬಲ್ಲದೆಂಬುದನ್ನು ಈಗಲೇ ಹೇಳಲು ಸಾಧ್ಯವಿಲ್ಲ. ರಾಜಕೀಯ, ಸಾಮಾಜಿಕ ಮತ್ತು ಶೈಕ್ಷಣಿಕ ಹಿನ್ನೆಲೆಯಲ್ಲಿ ಇದನ್ನು ವಿಮರ್ಶಿಸಿದಾಗ, ಇಂಗ್ಲೀಷು ಇನ್ನೂ ದೇಶದಲ್ಲಿ ಉಳಿಯುವದೆಂಬುದರಲ್ಲಿ ಸಂಶಯವಿಲ್ಲ. ಈ ಸಂದರ್ಭದಲ್ಲಿ ಕೇಂದ್ರದ ಮಾನ್ಯ ಶಿಕ್ಷಣ ಸಚಿವರು ತಾ॥ 31-1-1966 ರಂದು ಮದ್ರಾಸಿನಲ್ಲಿ ಮಾಡಿದ ತಮ್ಮ ಭಾಷಣವೊಂದರಲ್ಲಿ "English would continue to be the Associated Official Language along with Hindi, unless and until Non Hindi States agreed to Hindi becoming the sole official language." ಎಂದು ಅಪ್ಪಣೆ ಮಾಡಿದ್ದಾರೆ. ಮುಂದುವರಿದು ಅವರು "He attached the greatest importance to the study of English which must continue even when Hindi became the sole official Language".

English was the Language of international trade & commerce and of science & technology and it would be suicidel to throw away that asset" ( Indian Express of 1-2-66 Page 9) ಎಂದು ವಿಧಿಸಿದ್ದಾರೆ.

ಭೌತಿಕ ಮತ್ತು ಇನ್ನಿತರ ಶಾಸ್ತ್ರೀಯ ಜ್ಞಾನವು ವಾಯುವೇಗದಿಂದ ಪ್ರಗತಿ ಹೊಂದುತ್ತಿದೆ. ಸಂಶೋಧಕರು ಹೊಸ ಹೊಸ ಪ್ರಯೋಗಗಳನ್ನು ಮಾಡಿ, ಸರ್ವಸಮ್ಮತ ಸಿದ್ಧಾಂತಗಳನ್ನು ಮಂಡಿಸುತ್ತಿದ್ದಾರೆ. ಅರ್ಥಶಾಸ್ತ್ರ, ಅವಕಾಶ, ಸಮುದ್ರ ಮತ್ತು ಭೂಮಿಯ ಗರ್ಭದಲ್ಲಿರುವ ವಿವಿಧ ಸಂಪತ್ತುಗಳಿಗೆ ಸಂಬಂಧಿಸಿದ ಆಶ್ಚರ್ಯಕಾರಕ ಶೋಧಗಳು ಬೆಳಕಿಗೆ ಬರುತ್ತಲಿವೆ. ಚಂದ್ರಲೋಕವು ಭೂಲೋಕದೊಡನೆ ನೇರ ಸಂಬಂಧ ಪ್ರಸ್ಥಾಪಿಸಲೆತ್ನಿಸುತ್ತಿದೆ. ಈ ಎಲ್ಲ ಶೋಧಗಳ, ಹೊಸ ಸಿದ್ಧಾಂತಗಳ ವಿವರಗಳನ್ನು ಪಾಶ್ಚಿಮಾತ್ಯರು ಇಂಗ್ಲೀಷಿನಲ್ಲಿ ಬರೆದಿಡುತ್ತಲಿದ್ದಾರೆ. ಭಾರತದ ಆರ್ಥಿಕ ಸಾಮಾಜಿಕ ಪ್ರಗತಿಯು ತ್ವರಿತವಾಗಿ ಆಗಿ, ಜನ ಸಾಮಾನ್ಯರ ಆರೋಗ್ಯ, ವಯೋಮಾನ ಮತ್ತು ಜೀವನ ಮಟ್ಟಗಳು ಸುಧಾರಿಸಬೇಕಿದ್ದರೆ ಈ ಎಲ್ಲ ಹೊಸ ಶೋಧಗಳ ಲಾಭವನ್ನು ನಮ್ಮ ಜನತೆ ತುಂಬಾ ಪಡೆಯಬೇಕಾಗಿದೆ ಈ ಜ್ಞಾನ ಭಾಂಡಾರವನ್ನು ಹೊಂದುವ ಸುಲಭ ಮಾರ್ಗವೆಂದರೆ ಇಂಗ್ಲೀಷ ಭಾಷೆಯನ್ನು ಹಸ್ತಗತ ಮಾಡಿಕೊಳ್ಳುವದು, ಅದರಲ್ಲಿ ಪ್ರಾವೀಣ್ಯತೆಯನ್ನು ಹೊಂದುವದು. ನಮ್ಮ ದೇಶದ ಸದ್ಯದ ಪರಿಸ್ಥಿತಿಯಲ್ಲಿ ಇಂಗ್ಲೀಷ ಭಾಷೆಯ ಸಂಪೂರ್ಣ ಅಭ್ಯಾಸದ ಅವಶ್ಯಕತೆ ಎಷ್ಟಿದೆಯೆಂಬುದು ಮೇಲಿನ ವಿಚಾರಗಳಿಂದ ಸುಸ್ಪಷ್ಟವಾಗುವದು. ವಿಶಿಷ್ಟ ತರಗತಿಯ ದೇಶಾಭಿಮಾನಿಗಳೂ, ಸ್ವಭಾಷಾ ಅತಿಪ್ರೇಮಿಗಳೂ ಇಂಗ್ಲೀಷಿನ ವಿರುದ್ಧ ಬೇಕಾದಷ್ಟು ಕೂಗೆಬ್ಬಿಸಿದರೂ ವಿಚಾರ ಸ್ವಾತಂತ್ರ್ಯ ಸಂಸ್ಕೃತಿ, ಮಾತೃಶಿಕ್ಷಣದ ಸಮಾನಾಧಿಕಾರ ಮುಂತಾದ ಮೂಲಭೂತ ಅಧಿಕಾರಗಳ ಸವಿಯನ್ನು ಅನುಭವಿಸುತ್ತಿರುವ ಭಾರತದ ಪ್ರಜೆಗಳೂ, ಸ್ವಹಿತದ ದೃಷ್ಟಿಯಿಂದ ಇಂಗ್ಲೀಷನ್ನು ಇನ್ನೂ ಬಹುಕಾಲದವರೆಗೆ ಉಳಿಸಿಕೊಂಡು ಹೋಗುವರೆಂಬುವದರಲ್ಲಿ ಸಂಶ

ಯವಿಲ್ಲ. ರಾಜಕೀಯ ಮತ್ತು ಭಾಷಾ ಅತಿರೇಕಿಗಳ ಒತ್ತಡಕ್ಕೊಳಪಟ್ಟು ಈ ಭಾಷೆಯ ಉಚ್ಚಾಟನೆ ಮಾಡಿದರೆ ಸ್ವವಿನಾಶಕ್ಕೆ ಎಡೆಮಾಡಿಕೊಟ್ಟಂತಾಗುವದೆಂಬುವದರಲ್ಲಿ ಸಂಶಯವಿಲ್ಲ

ಇಂಗ್ಲೀಷ ಭಾಷೆಯನ್ನು ಮಾಧ್ಯಮಿಕ ಸಾಲೆಯಲ್ಲಿ ಕಡ್ಡಾಯವಾಗಿ ಕಲಿಯಬೇಕಾದ ಭಾಷಾ ಗುಂಪಿನಲ್ಲಿ ಮಾತೃಭಾಷೆಯ ನಂತರದ ಸ್ಥಾನವನ್ನು ಕೊಡಬೇಕಾಗಿ ಬಹುಸಂಖ್ಯಾಕರ ಆಗ್ರಹವಿದೆ. ರಾಷ್ಟ್ರಭಾಷೆಯಾದ ಹಿಂದಿಗೆ ಯಾವ ಸ್ಥಾನ ಕೊಡಬೇಕೆಂಬುದರ ಬಗ್ಗೆ ಇನ್ನೂ ಒಮ್ಮತವಾಗಿಲ್ಲ. ಕೇಂದ್ರ ಸರಕಾರದ ತ್ರಿಭಾಷಾ ಮಾಲಿಕೆಯಲ್ಲಿದ್ದ ಅದನ್ನು ಐಚ್ಛಿಕ ವಿಷಯವನ್ನಾಗಿಸಬೇಕೆಂದು ಈಗಾಗಲೇ ಪ್ರಚಾರ ನಡೆದಿದೆ. ಹೀಗಾಗಿ ಭಾಷಾ ಸಮಸ್ಯೆಯು ಇನ್ನೂ ಅಸ್ಥಿರ ಸ್ಥಿತಿಯಲ್ಲಿರುವದೆಂಬುದು ಮಾತ್ರ ನಿಶ್ಚಿತ.

ಮಾಧ್ಯಮಿಕ ಶಾಲೆಗೆ ಬರುವ ಮಕ್ಕಳಿಗೆ ಪ್ರಾರಂಭದಲ್ಲಿ ಎಷ್ಟು ಭಾಷೆಗಳನ್ನು ಏಕಕಾಲಕ್ಕೆ ಕಲಿಸಬಹುದು, ಆ ಎಳೆ ವಯಸ್ಸಿನ ಮಗುವಿಗೆ ಎಷ್ಟು ಭಾಷೆಗಳನ್ನು ಕಲಿಯುವದು ಸಾಧ್ಯವಾಗಬಹುದು, ಎಂಬುದರ ಬಗ್ಗೆ ಶಿಕ್ಷಣತಜ್ಞರು ಈಗಾಗಲೇ ತಮ್ಮ ನಿರ್ಣಯವನ್ನಿತ್ತಿದ್ದಾರೆ. ಮಾತೃಭಾಷೆಯನ್ನು ಹೊರತುಪಡಿಸಿ ೩-೪ ಭಾಷೆಗಳನ್ನು ಏಕಕಾಲಕ್ಕೆ ಕಲಿಯುವದು ಅಸಾಧ್ಯವೇನೂ ಅಲ್ಲ. 'ಬಹುಭಾಷಾ ವಸತಿಗಳಲ್ಲಿ' (Multi Language colonies)ರುವ ಮಕ್ಕಳು ಅನ್ಯರ ಅಪರಿಚಿತ ಭಾಷೆಗಳನ್ನು ಲೀಲಾಮಯವಾಗಿ ಮಾತನಾಡಲು ಕಲಿಯುವರೆಂಬುದು ಅನುಭವದ ಮಾತು. ಮೊದಲು ಮಾತು, ಆ ನಂತರ ಓದು ಮತ್ತು ಕೊನೆಯಲ್ಲಿ ಬರಹ, ಈ ಕ್ರಮದಲ್ಲಿ ಮಕ್ಕಳ ಅಭ್ಯಾಸವನ್ನು ಶಿಕ್ಷಕರು ಸಾಗಿಸಿದ್ದಾದರೆ, ಭಾಷೆ ಕಲಿಯುವಲ್ಲಿ, ಕಲಿಸುವಲ್ಲಿ ತೊಂದರೆಯುಂಟಾಗಲಿಕ್ಕಿಲ್ಲ. ಪರಕೀಯ ಭಾಷೆ ಕಲಿಯುವಾಗ ಪರರೊಡನೆ ಆ ಭಾಷೆಯಲ್ಲಿ ಮಾತನಾಡುವದನ್ನು ಮೊದಲು ಕಲಿಯಬೇಕಾಗುವದು. ಅದು ಆ ಭಾಷಾಭ್ಯಾಸದ ಮೊದಲ ಹೆಜ್ಜೆಯಾಗಬೇಕು. ಶಬ್ದಗಳ ವರ್ಣ ಅಕ್ಷರಗಳನ್ನು ಜೋಡಿಸಿ, ಬರೆಯುವದು (Spelling) ಶಬ್ದೋಚ್ಚಾರ, ಧ್ವನಿ ಏರಿಳಿತ ಮುಂತಾದವನ್ನು ಕಲಿಸುವದು ಈ ಕಾಲದಲ್ಲಿಯೇ ಎಂಬುದನ್ನು ಮರೆಯಲಾಗದು. ಶುದ್ಧ ಮತ್ತು ಸ್ಪಷ್ಟ ಉಚ್ಚಾರದ ತಳಹದಿಯನ್ನು ಈ ಕಾಲಕ್ಕೆ ಹಾಕಬೇಕು.

ಯಾವದೇ ಹೊಸ ಭಾಷೆಯನ್ನು ಕಲಿಯುವಾಗ ಆ ಭಾಷೆಯೇ ಮಾತೃಭಾಷೆಯಾಗುಳ್ಳ ಮಕ್ಕಳು ಅದನ್ನು ಕಲಿಯುವ ತೆರದಲ್ಲಿ ಕಲಿಸುವ ಏರ್ಪಾಟು ಮಾಡಿದ್ದಾದರೆ, ಕಲಿಯುವ ಮತ್ತು ಕಲಿಸುವ ಕ್ರಿಯೆಗಳು ಸ್ವಾಭಾವಿಕವಾಗಿಯೂ ಸುಲಭವಾಗಿಯೂ ಆಗುವವಲ್ಲದೆ ಮಕ್ಕಳ ಪ್ರಗತಿಯು ಕೂಡ ಉತ್ತಮವಾಗುವದೆಂದು ತಜ್ಞರು ಹೇಳುತ್ತಾರೆ. ಕಾರಣ ಎಷ್ಟು ಭಾಷೆಗಳನ್ನು ಮಕ್ಕಳಿಗೆ ಸಕಾಲಕ್ಕೆ ಕಲಿಸಬಹುದೆಂಬದನ್ನು ತಜ್ಞರಿಗೆ ಬಿಟ್ಟು, ಅಭ್ಯಾಸಪತ್ರಿಕೆಯಲ್ಲಿ ನಿರ್ದೇಶಿಸಿದ ಭಾಷೆಗಳನ್ನು ಶಾಸ್ತ್ರೋಕ್ತವಾಗಿ ಕಲಿಸುವದರ ಕಡೆಗೆ ಶಿಕ್ಷಕರ ಗಮನವಿರಬೇಕಾದುದು ಅವಶ್ಯ.

ಭಾಷೆಯನ್ನು ಕಲಿಸುವಾಗ ಕಲಿಯುವಿಕೆಯ ಬಗೆಗಿರುವ ನಿಯಮಗಳನ್ನು ( Laws of learning) ಶಿಕ್ಷಕರು ಗಮನದಲ್ಲಿಟ್ಟುಕೊಂಡು ಸಾಗಬೇಕು. ಕಲಿಸುವಿಕೆಯು ಹೆಚ್ಚು ಸ್ವಾಭಾವಿಕ ಮತ್ತು ಶಾಸ್ತ್ರೋಕ್ತವಾಗುವಂತೆ ಮಾಡಿದಲ್ಲಿ ಶಿಕ್ಷಣದ ಕೆಲಸವು ಹೆಚ್ಚು ಪರಿಣಾಮಕಾರಿಯಾಗುವದು ಮತ್ತು ಹೀಗೆ ಕಲಿಸಿದ ಜ್ಞಾನವು ಮಗುವಿನ ಅನುಭವದ ಒಂದು ಶಾಶ್ವತ ಅಂಗವಾಗುವದು. ತಜ್ಞರ ಸಹಾಯ ಸಲಹೆಯಿಂದ ಯಾವ ಪದ್ಧತಿಯನ್ನನುಸರಿಸಿ ಭಾಷಾಭ್ಯಾಸವನ್ನು ಸಾಗಿಸಬೇಕೆಂಬುದನ್ನು ಶಿಕ್ಷಕರು ನಿರ್ಣಯಿಸುವದು ಉತ್ತಮ. ಈ ಬಗ್ಗೆ

ಮೇಲ್ವಿಚಾರಕರ ಮಾರ್ಗದರ್ಶನದ ವ್ಯವಸ್ಥೆಯನ್ನು ಮೈಸೂರ ಇಲಾಖೆಯವರು ಈಗಾಗಲೇ ಮಾಡಿದ್ದಾರೆ. ಇದರಿಂದ ಶಿಕ್ಷಕರಿಗೆ ತುಂಬಾ ಸಹಾಯವಾಗಬಹುದು.

Direct method of teaching (ನೇರಪದ್ಧತಿ) Oral Composition ಪದ್ಧತಿ, Instructive & repetition method ಭಾಷಾಂತರ ಪದ್ಧತಿ, ಮುಂತಾದವುಗಳನ್ನು ಪ್ರಸಂಗಕ್ಕನುಸರಿಸಿ ಉಪಯೋಗಿಸುವದು ಒಳಿತು. ಯಾವದೇ ಒಂದು ಪದ್ಧತಿಗೆ ಅಂಟಿಕೊಂಡಿರುವ ಅತಿರೇಕಿಗಳಾಗಬಾರದು. ಒಟ್ಟಿನಲ್ಲಿ ಯಾವ ಪದ್ಧತಿಯನ್ನನು ಸರಿಸುವದರಿಂದ ಶಿಕ್ಷಣದ ಕೆಲಸವು ಸ್ವಾಭಾವಿಕವಾಗಿಯೂ ಪರಿಣಾಮಕಾರಕವಾಗಿಯೂ ಆಗುವದೋ ಆ ಪದ್ಧತಿಯನ್ನನುಸರಿಸಲಡ್ಡಿಯಿಲ್ಲ. ಪಾಠದ ಅವಧಿಯು ಮುಗಿದಾಗ ಮಕ್ಕಳು ಆನಂದಿತರಾಗಿ, ಉತ್ಸಾಹಿತರಾಗಿ ಕಂಡುಬಂದರೆ ಶಿಕ್ಷಕರು ಆ ಅವಧಿಯಲ್ಲಿ ಅನುಸರಿಸಿದ ಪದ್ಧತಿಯು ಉತ್ತಮವೆಂದು ಗಣಿಸಲಡ್ಡಿಯಿಲ್ಲ.

ಒಂದು ಪಾಠದ ಅವಧಿಯಲ್ಲಿ, ಎಷ್ಟು ಭಾಗವನ್ನು ಕಲಿಸಲು ಶಕ್ಯವೆಂಬದನ್ನು ಅನುಭವದಿಂದ ಕಂಡುಕೊಳ್ಳುವದು ಉತ್ತಮ.

ಮಗುವು ಹೊಸದಾಗಿ ಕಲಿತ ಶಬ್ದ, ವಾಕ್ಯ ಮತ್ತು ಅವುಗಳ ನಿರಾತಂಕ ಮತ್ತು ಪರಿಣಾಮಕಾರಿ ಉಪಯೋಗವು ಭಾಷಾ ಶಿಕ್ಷಣದ ಅಳತೆಗೋಲಾಗಿರುವದರಿಂದ ಹೊಸ ಶಬ್ದ, ವಾಕ್ಯ (Structure Patterns Methods) ಗಳನ್ನು ಕಲಿಸುವಾಗ ಒಂದು ಇತಿ-ಮಿತಿಯನ್ನಿಟ್ಟುಕೊಂಡು ನಿಯಮಿತವಾಗಿ, ಯೋಜನಾಬದ್ಧ ರೀತಿಯಲ್ಲಿ ಸಾಗುವದು ಉತ್ತಮ. ಜೀವನದಲ್ಲಿ ಮಾತುಗಾರಿಕೆಯ ತಮ್ಮ ವಿಚಾರಗಳನ್ನು ಸ್ಪಷ್ಟವಾಗಿ ಯೋಗ್ಯ ಶಬ್ದ-ವಾಕ್ಯಗಳಲ್ಲಿ ಹೇಳುವ ಬರೆಯುವ ಶಕ್ತಿಯ ಅವಶ್ಯಕತೆ ಎಷ್ಟಿದೆಯೆಂಬದನ್ನು ಹೇಳುವ ಅವಶ್ಯಕತೆಯಿಲ್ಲ. ಮಾನವ ಜೀವನದಲ್ಲಿ ಶಾಂತಿ ಸುಖಗಳು ಅವನು ಉಪಯೋಗಿಸುವ ಭಾಷೆಯನ್ನವಲಂಬಿಸುವದರಿಂದ, ಮಗುವಿನಲ್ಲಿ ಶಬ್ದ—ವಾಕ್ಯಗಳ ಸಾಕಷ್ಟು ಸಂಗ್ರಹವಿರುವದವಶ್ಯ. ಈ ಶಬ್ದ-ವಾಕ್ಯಗಳ ಯೋಗ್ಯ ಉಪಯೋಗದ ಮೇಲೆಯೇ ಅವನ ಪ್ರಗತಿ ಅವಲಂಬಿಸಿರುವದರಿಂದ ಈ ಭಾಷೆಯ ಈ ಅಂಶದ ಕಡೆಗೆ ಶಿಕ್ಷಕರು ವಿಶೇಷ ಗಮನ ಕೊಡುವದವಶ್ಯ. ನೀವು ಉಪಯೋಗಿಸುವ ಶಬ್ದ, ಶಬ್ದಸಮುಚ್ಚಯದ ಮುಖಾಂತರವೇ ನಿಮ್ಮ ಭಾವನೆಯ ತೀವ್ರತೆ, ಆಳ ಮತ್ತು ನಿಮ್ಮ ಮಾತಿನ ಉದ್ದೇಶದ ಅರ್ಥವು ನಿಮ್ಮ ಮಿತ್ರರಿಗೂ ಇನ್ನಿತರರಿಗೂ ಆಗುವದರಿಂದ ಜೀವನದಲ್ಲಿ ನೆರೆ–ಹೊರೆ ಸಮಾಜ ಮತ್ತು ಸಾಮಾನ್ಯ ಜನತೆಯೊಡನೆಯೂ ನಿಮ್ಮ ಸೌಹಾರ್ದ, ಸಹಕಾರ, ಮಧುರ ಸಂಬಂಧಗಳು ಇವುಗಳ ಯೋಗ್ಯ ನಿಯಂತ್ರಿತ ಉಪಯೋಗವನ್ನವಲಂಬಿಸಿರುವದರಿಂದ, ವ್ಯಕ್ತಿಯಲ್ಲಿರ ಬೇಕಾದ ಸಾಕಷ್ಟು ಶಬ್ದ-ವಾಕ್ಯಗಳ ಮಹತ್ವ ಎಷ್ಟಿದೆಯೆಂಬುದರ ಅರಿವು ಸಹಜವಾಗಿ ಆಗಬಹುದು. "Your words are your keys for. your thoughts And the more words you have at your command, the deeper, clearer & more accurate will be your thinking." Your command of any language will not only improve the process of your mind but it will give you assurance, build your self-confidence, lend colour to your personality, increase your popularity (Funk and Norman Luis); "ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ, ತನ್ನ ವಿನಾಶಕ್ಕೆ ಎಡೆ ಮಾಡಿಕೊಟ್ಟ." ಈ ಲೋಕವಾಕ್ಯಗಳಾದರೂ ಈ ಅಂಶವನ್ನೇ ವ್ಯಕ್ತಪಡಿಸುತ್ತವೆ.

VIII

ಮಕ್ಕಳಲ್ಲಿ ಸಾಕಷ್ಟು ಶಬ್ದಸಂಗ್ರಹವಾಗುವಂತೆ ಶಿಕ್ಷಕರು ಏರ್ಪಾಡು ಮಾಡಬೇಕು, (Vocabulary building) ಒಂದು ಕಾಲಕ್ಕೆ ಒಂದು ಪಾಠದಲ್ಲಿಯ ಎಷ್ಟು ಶಬ್ದಗಳನ್ನು ವಾಕ್ಯಗಳನ್ನು ( Structure Patterns ) ಕಲಿಸಬೇಕೆಂಬುದನ್ನು ಮುಂಚಿತವಾಗಿಯೇ ನಿರ್ಣಯಿಸಿ ಅವುಗಳ ದೃಢೀಕರಣ ಪ್ರಗತಿಯನ್ನು ನಿಯಮಿತವಾಗಿ ಬೆಳಸುತ್ತ ಹೋಗಬೇಕು. Vocabulary tests, word games, spelling games ಮುಂತಾದವುಗಳನ್ನು ವರ್ಗಗಳಲ್ಲಿ ಮೇಲಿಂದ ಮೇಲೆ ಏರ್ಪಡಿಸಿದಲ್ಲಿ ವಾಕ್ಯಗಳ ಶಬ್ದಸಂಗ್ರಹ ಅವುಗಳ ಯೋಗ್ಯ ಉಪಯೋಗ ಮಾಡುವಲ್ಲಿ ರೂಢಿಯಾಗುವದಲ್ಲದೆ ಭಾಷೆಯ ಮೇಲಿನ ಹಿಡಿತ ಬೆಳೆಯುತ್ತ ಹೋಗುವದು. ಆದರೆ ಈ ಅವಧಿಯಲ್ಲಿ ಲಕ್ಷದಲ್ಲಿಡಬೇಕಾದ ಮಹತ್ವದ ಅಂಶವೆಂದರೆ ಮಕ್ಕಳ ಗ್ರಹಣಶಕ್ತಿ ಮತ್ತು ಅದರ ಮಿತಿ, ಎಳೆಮಕ್ಕಳಿಗೆ ಆಹಾರ ಕೊಡುವಾಗ ತಾಯಿಯು ಮಗುವಿನ ವಯಸ್ಸು ಮತ್ತು ಅದರ ಪಾಚಕ ಶಕ್ತಿಯನ್ನು ಹೇಗೆ ಗಮನಿಸುವಳೋ ಆದೇ ತೆರವಾಗಿ ಶಿಕ್ಷಕರು ಸಹ ಬೌದ್ಧಿಕ ಆಹಾರದ ತುತ್ತನ್ನು ಮಗುವಿಗೆ ಉಣ್ಣಿಸುವಾಗ ಲಕ್ಷದಲ್ಲಿಡಬೇಕಾದುದು ಅವಶ್ಯ. ಹೊಸದಾಗಿ ಕಲಿಸಿದ ಶಬ್ದ-ವಾಕ್ಯಗಳನ್ನು ಮರುದಿನದ ಪಾಠದ ಆರಂಭದಲ್ಲಿಯೇ ರೂಢಿಯಲ್ಲಿ ತರಲೆತ್ನಿಸಬೇಕು, ಮತ್ತು ತಪ್ಪು ಗ್ರಹಿಕೆ, ತಪ್ಪು ತಿಳವಳಿಕೆ ಮತ್ತು ಪಾಠದ ಅವಧಿಯಲ್ಲಿಯ ವಿದ್ಯಾರ್ಥಿಯ ಅಲಕ್ಷತನದಿಂದಾದ ಇನ್ನಿತರ ತಪ್ಪುಗಳನ್ನು ಸಕಾಲದಲ್ಲಿ ತಿದ್ದಿ ಅವುಗಳ ಸರಿಯಾದ ಉಪಯೋಗ ಮಾಡುವಲ್ಲಿ ರೂಢಿ ಮಾಡಿಸಬೇಕು.

ಶಿಕ್ಷಣದ ಕೆಲಸವು ದ್ವಿಮುಖವಾದುದು. ಶಿಕ್ಷಕನು ಕಲಿಯುವ ಕ್ರಿಯೆ-ಕೆಲಸದಲ್ಲಿ ಸಹಾಯ ನೀಡುವವನಾದರೆ ಮಗುವು ಕಲಿಯುವವನು, ಇಲ್ಲಿ ಯಾರಿಗೆ ಹೆಚ್ಚು ಮಹತ್ವ ಕೊಡಬೇಕೆಂಬುದನ್ನು ಹೇಳುವ ಅವಶ್ಯಕತೆ ಇಲ್ಲ, ಮಗುವು ಕಲಿತನೆಂಬುದು ಸಿದ್ಧವಾದರೆ, ಶಿಕ್ಷಕನು ಕಲಿಸಿದನೆಂದು ಸಾಧಿಸುವ ಅವಶ್ಯಕತೆ ಇಲ್ಲ. ಶಿಕ್ಷಕರು ಮಕ್ಕಳಿಗೆ ಎಷ್ಟು ಕಲಿಸಿದೆವೆಂಬುದರ ಕಡೆಗೆ ಹೆಚ್ಚು ಗಮನಿಸದೆ ತಾವು ಕಲಿಸಿದುದರಲ್ಲಿಯ ಎಷ್ಟನ್ನು ಕಲಿತು " ಆತ್ಮಸಾತ್ " ಮಾಡಿಕೊಂಡನೆಂಬುದರ ಕಡೆಗೆ ಗಮನಿಸುದು ಅವಶ್ಯ.

ಕಲಿಸುವಲ್ಲಿ ಶಿಕ್ಷಕರಿಗೆ ಪೂರ್ಣ ಸ್ವಾತಂತ್ರ್ಯವಿರಬೇಕಾದುದೇನೋ ಅಗತ್ಯವಾದರೂ ಯೋಗ್ಯ ಪದ್ಧತಿಯನ್ನು ಅನುಸರಿಸುವಲ್ಲಿ ಮತ್ತು ಕಲಿಯುವಿಕೆಗೆ ಸಂಬಂಧಿಸಿದ ನಿಯಮಗಳನ್ನು ತಪ್ಪದೆ ಅನುಸರಿಸುವಲ್ಲಿ ಅವರು ಬಂಧಿತರಾಗಿಯೇ ಇರಬೇಕಾದುದು ಮಕ್ಕಳ ಹಿತದ ದೃಷ್ಟಿಯಿಂದ ಅನಿವಾರ್ಯವಾದುದು.

ಹಸ್ತಾಕ್ಷರ—ಕೈಬರಹದ ಬಗ್ಗೆ ಒಂದೆರಡು ಮಾತುಗಳನ್ನು ಇಲ್ಲಿ ಹೇಳದೆ ಗತ್ಯಂತರವಿಲ್ಲ.

ನಮ್ಮ ಪೂರ್ವಜರ ಹಸ್ತಾಕ್ಷರಗಳು ಮುತ್ತಿನಂತಿದ್ದುವೆಂಬುವದು ಹಳೆ ಗ್ರಂಥಗಳ ಮೂಲ ಪ್ರತಿಗಳಿಂದಲೂ, ತಾಡಪತ್ರಗಳಿಂದಲೂ ಕಂಡುಬರುತ್ತದೆ. ಅವರು ಬರೆದ ಅಕ್ಷರಗಳು ನೋಡಲು ಅಂದವಾಗಿರುವವಲ್ಲದೆ, ಅಕ್ಷರಗಳ ಅವಯವಗಳಲ್ಲಿ ಸಪ್ರಮಾಣತೆಯೂ ಬರವಣಿಗೆಯಲ್ಲಿ ಸೌಂದರ್ಯ ದೃಷ್ಟಿಯೂ ಕಂಡು ಬರುತ್ತವೆ. ಕಳೆದ ೩೦—೨೦ ವರ್ಷಗಳಿಂದ ಬರವಣಿಗೆ-ಹಸ್ತಾಕ್ಷರದ ಕಡೆಗೆ ಸಾಕಷ್ಟು ಲಕ್ಷಪೂರೈಸಿಲ್ಲವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಈ ದುರವಸ್ಥೆಗೆ ಹಲವಾರು ಕಾರಣಗಳಿರಬಹುದು. ಕಿತ್ತೆ ಬರೆಯುವದು, ಕಾಪಿ ಬರೆಯುವದು ಕೆಳಗಿನ ವರ್ಗಗಳಲ್ಲಿ ಕ್ರಮೇಣ ಕಡಿಮೆಯಾಗುತ್ತ ಬಂದು, ಇತ್ತೀಚೆಗೆ ಅದು ಪೂರ್ಣ ಮಾಯವಾಗಿದೆ. ಬಾಲಕ ವರ್ಗ ಮತ್ತು ೧ ರಿಂದ ೪ ನೆಯ ವರ್ಗಗಳಲ್ಲಿ ಮತ್ತು ಹಾಯಸ್ಕೂಲಿನ ಕೆಳವರ್ಗಗಳಲ್ಲಿ (ಮಾತೃಭಾಷೆಗೆ ಸಂಬಂಧಿಸಿ, V, VI, VII ಇಂಗ್ಲಿಷಿನ ಅಭ್ಯಾಸಕ್ಕೆ ಸಂಬಂಧಿಸಿ) ಕಾಪಿ ಬರೆಹ, ನೋಡಿ ಬರೆಯುವದು, ಶುದ್ಧ ಬರೆಹ ಮುಂತಾದವುಗಳ ಮಹತ್ವ ಕಡಿಮೆಯಾಗಿ ಅವು ಪೂರ್ಣ ದುರ್ಲಕ್ಷಿಸಲ್ಪಟ್ಟಿವೆಯೆಂದು

ಹೇಳಿದರೆ ತಪ್ಪಾಗಲಿಕ್ಕಿಲ್ಲ. ಫಾವಂಟಿನ್ ಪೆನ್ನಿನ, ಬಾಲ್ ಪೆನ್ನಿನ ಅನಿರ್ಬಂಧ ಉಪಯೋಗವೂ ಈ ದುರವಸ್ಥೆಯ ಕಾರಣಗಳಲ್ಲೊಂದಾಗಿದೆಯೆಂದು ತಜ್ಞರ ಮತ. ಮೇಲಿನ ಎಲ್ಲ ಮಾತುಗಳು ಇಂಗ್ಲಿಷಿಗೆ ಅನ್ವಯಿಸುವಂತೆ ಕನ್ನಡಕ್ಕೆ ಅನ್ವಯಿಸುತ್ತವೆ. ತಾವು ಬರೆದದ್ದು ಅನ್ಯರಿಗೆ ಓದಲಿಕ್ಕೆ ಬರುವದಿಲ್ಲ. ಕೆಲ ಸಂದರ್ಭದಲ್ಲಿ ತಾವು ಬರೆದದ್ದು ತಮಗೇ ಓದಲಿಕ್ಕೆ ಬರದಷ್ಟು ಅಕ್ಷರಗಳೂ ಹಾಳಾಗಿರುತ್ತವೆ. ಸಂಸ್ಕೃತ ಸುಭಾಷೆಯೊಂದರಲ್ಲಿ ವಿನೋದಕ್ಕಾಗಿ ಹೇಳಿದ " ಸಖಿ ಚತುರಃ ಮೇ ಭರ್ತಾ-ಯಲ್ಲಿಖಿತಮ್ ತದ್ ನ ಕೋಪಿ ವಾಚಯತಿ। ಸಖೀ ಚತುರತರಃ ಮೇ ಭರ್ತಾ-ಯಲ್ಲಿಖಿತವ್ ತದ್ ಸ್ವಯಮಪಿ ನ ವಾಚಯತಿ " ಎಂಬದು ಈಗ ನೂರಕ್ಕೆ ನೂರರಷ್ಟು ಸತ್ಯ ಮಾತಾಗಿದೆಯೆಂಬುವದನ್ನು ಮನದಟ್ಟು ಮಾಡಿಕೊಳ್ಳಬಹುದು. ಬರೆವಣಿಗೆಯಲ್ಲಿ ಸುಧಾರಣೆಯಾಗುವದು ಅವಶ್ಯವೆಂದಾಗ ಆ ಸುಧಾರಣೆಯನ್ನು ಸಾಧಿಸುವ ಬಗ್ಗೆ ಸುಸಂಘಟಿತ ಪ್ರಯತ್ನ ಮಾಡುವದು ಅತ್ಯವಶ್ಯ. ಈ ಕೆಲಸದಲ್ಲಿ ಶಿಕ್ಷಕರು ತುಂಬಾ ಪರಿಶ್ರಮ ಪಡಬೇಕಲ್ಲದೆ ಮಕ್ಕಳ ಮತ್ತು ಪಾಲಕರ ನೆರವನ್ನೂ ಸಹಕಾರವನ್ನೂ ತಪ್ಪದೆ ಪಡೆಯಬೇಕು. ಇಂಗ್ಲೀಷಿನಲ್ಲಿ ಕರ್ಸಿವ್ಹ-ರನಿಂಗ ಹ್ಯಾಂಡ ಮತ್ತು ಪ್ರಿಂಟ ಸ್ಕ್ರಿಪ್ಟ ಎಂಬುವಾಗಿ ಬರೆಹದಲ್ಲಿ ಎರಡು ಪ್ರಕಾರಗಳುಂಟು. ಪ್ರಿಂಟ ಸ್ಕ್ರಿಪ್ಟ ಇತ್ತೀಚೆಗೆ ರೂಢಿಯಲ್ಲಿ ಬಂದುದು. ಅಚ್ಚುಕಟ್ಟು ಓರಣಗಳ ದೃಷ್ಟಿಯಿಂದ ಅದು ಗ್ರಾಹ್ಯವೆನಿಸಿದರೂ ಸೌಂದರ್ಯದ ದೃಷ್ಟಿ ಅದರಲ್ಲಿಲ್ಲ. ಆ ಸೌಂದರ್ಯವನ್ನು ಓಟದ-ಮೋಡಿ ಲಿಪಿಯಲ್ಲಿ ಮಾತ್ರ ಕಾಣಬಹುದು. ಆಧುನಿಕ ಯಾಂತ್ರಿಕ ಯುಗದಲ್ಲಿ ಸೌಂದರ್ಯೋಪಾಸಕರ ಸಂಖ್ಯೆ ಇಲ್ಲದಂತಾಗುತ್ತದೆಯೆಂದು ಹೇಳಿದರೆ ಅತಿಶಯೋಕ್ತಿಯಲ್ಲ. ಶಿಕ್ಷಕರು ಇಂಗ್ಲೀಷಿನ ವರ್ಣಮಾಲೆಯ ೨—೩ ನೆಯ ಲಿಪಿಗಳಲ್ಲಿ ಮಕ್ಕಳಿಗೆ ಸಾಕಷ್ಟು ರೂಢಿ ಮಾಡಿಸಿ, ಕರ್ಸಿವ್ಹ. ಓಟದ ಮೋಡಿ ಪದ್ಧತಿಯ ಪುನರುಜ್ಜೀವನವನ್ನು ಸಾಧಿಸಿದಲ್ಲಿ ಒಂದು ದೊಡ್ಡ ಕೆಲಸ ಮಾಡಿದಂತಾಗುವದು. ಅಕ್ಷರಗಳನ್ನು ಬರೆಸುವಾಗ ವರ್ಣರಚನೆ, ಅಕ್ಷರಗಳ ಅವಯವಗಳ ಅಂಗಸ್ಥಿತಿ ಮುಂತಾದವುಗಳ ಕಡೆಗೆ ಹೆಚ್ಚು ಲಕ್ಷ್ಯ ಪೂರೈಸಬೇಕಾಗುವದು. ಹೀಗೆ ಮಾಡದೇ ಹೋದಲ್ಲಿ ಅನಪೇಕ್ಷಿತ ತಪ್ಪುಗಳು ಕಂಡುಬರುವವು. ಉದಾ— d–b, C–G, n-u, c–e, p–q, r–v, *m*–*w* ಮುಂತಾದವನ್ನು ಬರೆಯುವಲ್ಲಿ ಮೊದಲನೆಯದರ ಬದಲು ಎರಡನೆಯದನ್ನು ಉಪಯೋಗಿಸುವದು ಕಂಡುಬರುವದು. ಕೆಲ ಸಂದರ್ಭದಲ್ಲಿ ಅಕ್ಷರಗಳನ್ನು ತಿರುವುಮುರುವಾಗಿ ಬರೆದುದೂ ಕಂಡುಬರುತ್ತದೆ. ಈ ತಪ್ಪುಗಳ ಕಡೆಗೆ ಶಿಕ್ಷಕರು ವರ್ಣಮಾಲೆ, ಮೂಲಾಕ್ಷರ ಲಿಪಿಗಳನ್ನು ಕಲಿಸುವಾಗ ಹೆಚ್ಚು ಗಮನ ಕೊಟ್ಟು ಮಕ್ಕಳು ತಪ್ಪು ಮಾಡಿದಾಗ ಅವರಿಂದಲೇ ತಿದ್ದಿಸಿ, ಪುನಃ ಪುನಃ ಬರೆಯಿಸಿ, ರೂಢಿ ಮಾಡಿಸುತ್ತ ಹೋದಲ್ಲಿ ಈ ತೆರದ ತಪ್ಪುಗಳಾಗುವ ಸಂಭವ ಕಡಿಮೆಯಾಗುತ್ತ ಹೋಗುವದು.

ಭಾಷಾಪ್ರಭುತ್ವವನ್ನು ಸಾಧಿಸುವಾಗ ಶಬ್ದಸಂಪತ್ತು, ಕೆಲ ವಿಶಿಷ್ಟ ವಾಕ್ಯರಚನೆಗಳನ್ನು ಅವಗತ ಮಾಡಿ ಅವುಗಳನ್ನು ಸುಲಭವಾಗಿ ಉಪಯೋಗ ಮಾಡಿಕೊಳ್ಳುವದು, ಉಚ್ಚಾರ, ಶಬ್ದಗಳ ವಾಕ್ಸಂಪ್ರದಾಯ, ಒಳ್ನುಡಿ, ವಾಕ್ಸರಣಿಗಳ ಯೋಗ್ಯ ಉಪಯೋಗ, ಓದುವಲ್ಲಿಯ ಪ್ರಾವೀಣ್ಯತೆ ಮತ್ತು ಶಬ್ದಗಳ ಕಾಗುಣಿತ, ಬರೆಯುವಲ್ಲಿಯ ಪ್ರಾವೀಣ್ಯತೆ ಇವುಗಳ ಸಪ್ರಮಾಣ ಬೆಳವಣಿಗೆ ಸಾಧಿಸುವದನ್ನವಲಂಬಿಸಿರುತ್ತದೆ. ಈ ಪರಿಷ್ಕೃತ ಮಾಲಿಕೆಯಲ್ಲಿ ಇವೆಲ್ಲದರಲ್ಲಿ ಸಾಕಷ್ಟು ಲಕ್ಷ್ಯ ಪೂರೈಸದಿದ್ದರೂ, ಅವುಗಳನ್ನು ಅಲಕ್ಷಿಸಿಲ್ಲ. ಓದುಗರು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಉಪಲಬ್ಧವಿದ್ದ ಸ್ಥೂಲ ಮಾಹಿತಿಯ ಸೂಚನೆಗಳ ಸಹಾಯದಿಂದ ಭಾಷಾಪ್ರಭುತ್ವದ ತಳಹದಿಯನ್ನು ಹಾಕಿದಲ್ಲಿ ಪ್ರಕಾಶಕರ ಪ್ರಯತ್ನವು ಸಾರ್ಥಕವಾಯಿತೆಂದು ಗಣಿಸಲಾಗುವದು.

ಪ್ರಕಾಶಕರು.

——

# ಶಿಕ್ಷಕರಿಗೆ ಸೂಚನೆ.



ಈ ಪುಸ್ತಕವನ್ನು ಕಲಿಸುವಾಗ ಶಿಕ್ಷಕರು ಮೊದಲು ನಿಯಮಗಳನ್ನೂ ಉದಾಹರಣೆಗಳನ್ನೂ ಶಬ್ದಗಳನ್ನೂ ಓದಿಸಿಕೊಳ್ಳಬೇಕು. ನಿಯಮಗಳ ಅರ್ಥವು ಹುಡುಗರಿಗೆ ತಿಳಿಯುತ್ತದೆಯೋ ಇಲ್ಲವೋ ಎಂಬದನ್ನು ಕೇಳಿ ನೋಡಬೇಕು. ತಿಳಿಯದೆ ಇದ್ದರೆ, ಅದನ್ನು ಚನ್ನಾಗಿ ಹೇಳಬೇಕು. ಶಬ್ದಗಳನ್ನು ಓದಿಸುವಾಗ ಉಪಪದ, ಉಚ್ಚಾರ, ಸ್ವರಾಘಾತ, ವರ್ಣರಚನೆ ಮುಂತಾದವುಗಳ ಕಡೆಗೆ ಹುಡುಗರ ಲಕ್ಷ್ಯವನ್ನು ಎಳೆಯಬೇಕು. ಇದೇ ಮೇರೆಗೆ ಪ್ರತಿ ಒಂದು ಶಬ್ದವು ವ್ಯಾಕರಣಕ್ಕನುಸರಿಸಿ ಯಾವ ಜಾತಿಯದು ಎಂಬದನ್ನು ಕಲಿಸಬೇಕು. ಮರುದಿವಸ ಕಲಿಸಿದ ಪಾಠದೊಳಗೆ ಮೊದಲು ಪ್ರಶ್ನ ಮಾಡಬೇಕು. ಹುಡುಗರು ಪಾಠ ಚನ್ನಾಗಿ ಕಲಿತುಕೊಂಡು ಬಂದಿದ್ದಾರೆಂದು ಕಂಡು ಬಂದರೆ ಭಾಷಾಂತರಪಾಠದ ಭಾಷಾಂತರವನ್ನು ವರ್ಗದೊಳಗೆ ಬಾಯಿಂದ ಮಾಡಿಸಿಕೊಂಡು ಮುಂದಿನ ಪಾಠವನ್ನು ಹೇಳಬೇಕು. ಶಾಲೆಯಲ್ಲಿ ಮಾಡಿಸಿದ ಭಾಷಾಂತರವನ್ನು ಮನೆಯಲ್ಲಿ ವಹಿಯೊಳಗೆ ಬರೆದು ತರಲಿಕ್ಕೆ ಹೇಳಬೇಕು. ಅವರು ಬರೆದು ತಂದ ಬಳಿಕ ಶಿಕ್ಷಕನು ಅದನ್ನು ತಿದ್ದಿ, ತಪ್ಪುಗಳನ್ನು ಹುಡುಗರಿಗೆ ವರ್ಗದೊಳಗೆ ತಿಳಿಸಿ ಹೇಳಬೇಕು. ಹಿಂದಿನ ಶಬ್ದಗಳನ್ನು ಆಗಾಗ್ಗೆ ಕೇಳುತ್ತಿರಬೇಕು. ಮತ್ತು ಈ ಪುಸ್ತಕದ ಕಟ್ಟಕಡೆಯಲ್ಲಿ ಕೊಟ್ಟ ಪ್ರಶ್ನೆಗಳನ್ನು ಕೇಳಬೇಕು. ಪರೀಕ್ಷೆಯ ದಿವಸ ಹೊಸ ಪ್ರಶ್ನಗಳನ್ನು ಹಾಕಬೇಕು. ಆಗ ಪುಸ್ತಕದೊಳಗಿನ ವಾಕ್ಯಗಳನ್ನು ಹೇಳದೆ, ಅವೇ ಶಬ್ದಗಳಿಂದ ಹೊಸ ವಾಕ್ಯಗಳನ್ನು ರಚಿಸಬೇಕು. ಮೊದಲಿನಿಂದ ವ್ಯಾಕರಣದ ಕಡೆಗೆ ಬಹಳ ಲಕ್ಷ್ಯ ಕೊಡಬೇಕು ಹಾಗು ಶಬ್ದಗಳ ವರ್ಣರಚನೆಯನ್ನು ಯಾವಾಗಲೂ ಕೇಳುತ್ತಿರಬೇಕು.



## ಅನುಕ್ರಮಣಿಕೆ.

## CONTENTS.



## ಪುರವಣಿ APPENDIX.





# ಭಾಷಾಂತರಪಾಠಮಾಲೆ

## ಎರಡನೇ ಪುಸ್ತಕ.

### ೧ ನೇ ಪಾಠ.

### ಕ್ರಿಯಾಪದಗಳ ಬಗ್ಗೆ ಸ್ಫುಟ ವಿಚಾರವು.

### NOTES ON VERBS.

೧ ಇಂಗ್ಲಿಷ ಭಾಷೆಯೊಳಗಿನ ಕೆಲವು ಧಾತುಗಳಿಗೆ ಸಮಾನವಾದ ಅರ್ಥವುಳ್ಳ ಸ್ವತಂತ್ರ ಧಾತುಗಳು ಕನ್ನಡದಲ್ಲಿ ಇಲ್ಲ. ಈ ಪ್ರಕಾರ ಧಾತುಗಳಿಗೆ ಬದಲಾಗಿ ಕನ್ನಡದಲ್ಲಿ ಇಸು ಪ್ರತ್ಯಯ ಹಚ್ಚಿದ ಕ್ರಿಯಾಪದಗಳನ್ನೂ ಸಾಮಾಸಿಕ ಕ್ರಿಯಾಪದಗಳನ್ನೂ ಪ್ರಯೋಗಿಸಬೇಕಾಗುತ್ತದೆ.

ಉದಾ:-To protect ಸಂರಕ್ಷಿಸು.
To repent ಪಶ್ಚಾತ್ತಾಪ ಪಡು.
He protects Rama ಅವನು ರಾಮನನ್ನು ಸಂರಕ್ಷಿಸುತ್ತಾನೆ.
I repent for my sins ನನ್ನ ಪಾಪಗಳ ಬಗ್ಗೆ ನಾನು ಪಶ್ಚಾತ್ತಾಪ ಪಡುತ್ತೇನೆ.

ಈ ಪ್ರಕಾರದ ಕೆಲವು ಕ್ರಿಯಾಪದಗಳು ಕೆಳಗೆ ಕೊಡಲ್ಪಟ್ಟಿವೆ.

| | | | |
|---|---|---|---|
| To praise | ಸ್ತುತಿಸು. | To dis-obey' | ಅಪ್ಪಣೆ ಮೀರು; ಮಾತು ಮೀರು. |
| To blame | ದೂಷಿಸು. | To des-troy | ಹಾಳು ಮಾಡು, ನಾಶ ಮಾಡು. |
| To o-bey | ಅಪ್ಪಣೆ ಪಾಲಿಸು, ಮಾತು ಕೇಳು. | To wat'er | ೧ ನೀರು ಹಾಕು, ಕುಡಿಸು, ತೋಯಿಸು; ೨ ನೀರು ಬರು. |
| To help / To as-sist' | ನೆರವಾಗು, ಸಹಾಯ ಮಾಡು. | To stu'dy | ಅಭ್ಯಾಸ ಮಾಡು, |
| To permit | ಅಪ್ಪಣೆ ಕೊಡು, ಪರವಾನಗಿ—, ಸ್ವತಂತ್ರ— | To enjoy | (ಸುಖ) ಭೋಗಿಸು. |
| | | To suf'fer | (ದುಃಖ) ಅನುಭವಿಸು. |
| To or'der | ಆಜ್ಞಾಪಿಸು. | To pun'ish | ಶಿಕ್ಷಿಸು, ದಂಡಿಸು. |

1) ಇದಕ್ಕೆ ಕನ್ನಡ ವ್ಯಾಕರಣದಲ್ಲಿ ಕ್ರಿಯಾಸಮಾಸವೆಂಬ ಹೆಸರುಂಟು.

| | | | |
|---|---|---|---|
| To breathe | ಉಸುರಾಡಿಸು. | To at-tend | ೧ ಮನಸು ಹಚ್ಚು. ಲಕ್ಷ್ಯ ಕೊಡು; ೨ ಸಂಗಡ ಇರು. |
| To re'com-mend' | ಶಿಫಾರಸು ಮಾಡು. | | |
| To Exam-ine | ಪರೀಕ್ಷಿಸು. | To dare | ಧೈರ್ಯ ಮಾಡು. |
| ಪೂಜಿಸು | to wor'ship. | ಪ್ರೀತಿ ಮಾಡು | to love. |
| ಮುದ್ದು ಕೊಡು | to kiss. | ಪ್ರಾರ್ಥಿಸು | to pray. |
| ವಾದಿಸು | to dis-pute. | ವಿನೋದಿಸು, ರಂಜಿಸು | to amuse. |
| ಆಣೆ ಮಾಡು, ಆಣೆ ಇಟ್ಟುಕೋ | to swear. | ಚಿತ್ರ ತೆಗೆ, ಬಣ್ಣ ಹಚ್ಚು | to dye[1], to paint. |

೨ To have ಕ್ರಿಯಾಪದದಂಥ ಬೇರೆ ಕೆಲವು ಕ್ರಿಯಾಪದಗಳು ಇಂಗ್ಲಿಷದಲ್ಲಿ ಉಂಟು. ಅವುಗಳ ಅರ್ಥವನ್ನು ಕನ್ನಡದಲ್ಲಿ ಮಾಡುವಾಗ ಕರ್ತೃಪದವನ್ನು ಚತುರ್ಥಿಯಲ್ಲಿಟ್ಟು, ಕರ್ಮಪದವನ್ನು ಕರ್ತೃಸ್ಥಾನದಲ್ಲಿಡಬೇಕಾಗುತ್ತದೆ.

ಉದಾ— to like ಸೇರು.
I like milk ನನಗೆ ಹಾಲು ಸೇರುತ್ತದೆ.

ಈ ಪ್ರಕಾರದ ಕೆಲವು ಕ್ರಿಯಾಪದಗಳು ಕೆಳಗೆ ಕೊಡಲ್ಪಟ್ಟಿವೆ.

| | | | |
|---|---|---|---|
| To think | ತೋರು, ಆಲೋಚಿಸು. | To find | ಸಿಗು, ಶೋಧಿಸಿ ತೆಗೆ. |
| To feel | ತಿಳಿ, ಮನಸಿಗೆ ಅನಿಸು, ಅನುಭವಿಸು. | To know | ಗೊತ್ತಿರು, ತಿಳಿ, ಅರಿ. |
| To want | ಬೇಕಾಗಿರು, ಅವಶ್ಯವಿರು. | To suspect' | ಸಂಶಯ ಬರು. |
| To re-mem'ber[2], To re-col-lect | ನೆನಪಿನಲ್ಲಿರು, ನೆನಪು ಆಗು. | ಒಪ್ಪು, ಒಗ್ಗು, ಅನುಕೂಲವಾಗು | to suit. to become. |

ಆದರೆ to know ಎಂಬದಕ್ಕೆ ತಿಳಿ, to think ಆಲೋಚಿಸು, to feel ಅನುಭವಿಸು, to find ಶೋಧಿಸಿ ತೆಗೆ, to remember ನೆನಪಿನಲ್ಲಿಡು ಎಂಬ ಅರ್ಥಗಳಿದ್ದಾಗ ಅವುಗಳನ್ನು ಕನ್ನಡದಲ್ಲಿ ಇಂಗ್ಲಿಷದಂತೆಯೇ ಪ್ರಯೋಗಿಸಬೇಕು.

1) To dye ಎಂಬ ಕ್ರಿಯಾಪದವನ್ನು ಬಹುತರವಾಗಿ ಬಟ್ಟೆಗಳಿಗೆ ಬಣ್ಣ ಕೊಡುವದರಲ್ಲಿ ಪ್ರಯೋಗಿಸುವರು. To paint ಎಂಬದನ್ನು ಚಿತ್ರ; ಗೋಡೆ ಮುಂತಾದವುಗಳಿಗೆ ಬಣ್ಣ ಹಚ್ಚಬೇಕಾದರೆ ಉಪಯೋಗಿಸುತ್ತಾರೆ. 2) To remember ನೆನಪು ಇರು–ಇಡು; to recollect ನೆನಪಾಗು; ನೆನಪಿಗೆ ಬರು. ಮೊದಲನೇ ಶಬ್ದದ ಅರ್ಥವು 'ತಾನೇ ನೆನಪಾಗು' ಎಂದು ಆಗುತ್ತದೆ; ಎರಡನೇದರ ಅರ್ಥವು 'ಮರೆತು ಹೋದಂಥ ಮಾತಿನ ನೆನಪು ಮಾಡಿಕೊಳ್ಳು,' ಎಂತ ಆಗುತ್ತದೆ.

೩ To owe (ಓ) ಋಣಿಯಾಗಿರು, to cost ಕ್ರಯ ಬೀಳು ಮುಂತಾದ ಎಷ್ಟೋ ಧಾತುಗಳ ಕ್ರಿಯಾಪದಗಳ ಭಾಷಾಂತರವನ್ನು ಬೇರೆ ರೀತಿಯಿಂದ ಮಾಡಬೇಕಾಗುತ್ತದೆ ಉದಾ....

**He owes me two rupees** ಅವನು ನನಗೆ ಎರಡು ರೂಪಾಯಿ ಕೊಡಬೇಕು. ಅಥವಾ ಅವನಿಂದ ನನಗೆ ಎರಡು ರೂಪಾಯಿ ಸಲ್ಲತಕ್ಕದ್ದು.

**This coat costs five rupees** ಈ ಅಂಗಿಗೆ ಐದು ರೂಪಾಯಿ ಬೀಳುತ್ತವೆ.

೪ ಮೇಲೆ ಕೊಟ್ಟ ಉದಾಹರಣೆಗಳಿಂದ ಸಾಧಾರಣವಾಗಿ ನೆನಪಿನಲ್ಲಿಡತಕ್ಕ ನಿಯಮವು ಯಾವುದೆಂದರೆ, ಕನ್ನಡದಿಂದ ಇಂಗ್ಲಿಷದಲ್ಲಾಗಲಿ ಇಂಗ್ಲಿಷದಿಂದ ಕನ್ನಡದಲ್ಲಾಗಲಿ ಭಾಷಾಂತರ ಮಾಡುವಾಗ ಶಬ್ದಗಳ ರೂಪಗಳ ಕಡೆಗೆ ಲಕ್ಷ್ಯಕೊಟ್ಟು ಶಬ್ದಶಃ ಭಾಷಾಂತರ ಮಾಡುವ ರೂಢಿ ಇಡುವದು ಒಳ್ಳೇದು. ಆದರೆ ಕೆಲವು ಕಡೆಯಲ್ಲಿ ಹೀಗೆ ಮಾಡಿದರೆ ನಡೆಯುವದಿಲ್ಲ; ಆದುದರಿಂದ, ಭಾಷಾಪದ್ಧತಿಯ ಕಡೆಗೂ, ಅರ್ಥದ ಕಡೆಗೂ ಯಾವಾಗಲೂ ಚನ್ನಾಗಿ ಲಕ್ಷ್ಯಕೊಡುವದು ಉತ್ತಮ.

## ೫ ಶಬ್ದಸಂಗ್ರಹ[1] ೧.

| | | | |
|---|---|---|---|
| **A law** | ಕಾಯಿದೆ, ಕಟ್ಟಳೆ. | **To re-joice'** | ಸಂತೋಷಪಡು, ಹಿಗ್ಗು, ಹರ್ಷಿಸು. |
| **Law, the law** | ಧರ್ಮಶಾಸ್ತ್ರ. | | |
| **To thank** | ಉಪಕಾರವಾಯಿತೆನ್ನು, ಉಪಕಾರ ಮನ್ನಿಸು. | **To flourish** | ಊರ್ಜಿತ ಸ್ಥಿತಿ ಹೊಂದು, ಏಳಿಗೆಯಲ್ಲಿರು. |
| ಮನಗಾಣಿಸು | **to con-vince.** | **O'rder** | ೧ ಅಪ್ಪಣೆ, ಆಜ್ಞೆ, ೨ ಕ್ರಮ, ವ್ಯವಸ್ಥೆ. |
| | | ಏರು | **to climb** (ಕ್ಲಾಯಿಮ್) |

## ಭಾಷಾಂತರಪಾಠ ೧.

೬ 1 **The good citizens were rejoicing, the bad, were weeping. 2 Our country will flourish. 3 I think so. 4 I am thinking. 5 I know this story. 6 I want your pen-knife. 7 He likes that book. 8 I thank you. 9 I love you.**

---

1) ಭಾಷಾಂತರ ಮಾಡುವಾಗ ಒಂದು ಇಂಗ್ಲಿಷ ಶಬ್ದಕ್ಕೆ ಕೋಶದೊಳಗಿನ ಕನ್ನಡ ಶಬ್ದವು ವಾಕ್ಯ ರಚನೆಗೆ ಸರಿಯಾಗಿರದಿದ್ದರೆ, ಅದೇ ಅರ್ಥದ ಮತ್ತೊಂದು ಶಬ್ದವನ್ನು ಉಪಯೋಗಿಸಬೇಕು.

10 I will praise good men. 11 Our friends will assist us. 12 He will examine you. 13 I will recommend you. 14 Walls protect city. 15 A good boy obeys his parents. 16 They will obey the laws of their country. 17 He will obey my orders. 18 Some men disobey God and laws. 19 Your father will blame you. 20 They were destroying the villages.

೧ ಆ ಹುಡುಗನು ತನ್ನ ತಂದೆತಾಯಿಗಳ ಮಾತು ಕೇಳುವನು. ೨ ಕೆಟ್ಟ ಹುಡುಗರು ತಮ್ಮ ತಂದೆತಾಯಿಗಳ ಮಾತು ಮೀರುತ್ತಾರೆ. ೩ ನಾನು ಕಾಯಿದೆಗಳನ್ನು ಕಲಿಯುತ್ತೇನೆ. ೪ ಅವನು ನಿನ್ನನ್ನು ದೂಷಿಸುವನು. ೫ ಅವರ ದೇಶವು ಊರ್ಜಿತ ಸ್ಥಿತಿಯನ್ನು ಹೊಂದುವದು. ೬ ಅವರು ಪಟ್ಟಣವನ್ನು ಹಾಳು ಮಾಡುವರು. ೭ ನಾನು ನನ್ನ ಒಡೆಯನ ಅಪ್ಪಣೆ ಪಾಲಿಸುವೆನು. ೮ ಕೋತಿಗಳು ಗಿಡಗಳನ್ನು ಏರುತ್ತಲಿವೆ. ೯ ಅವನು ತನ್ನ ಸ್ನೇಹಿತರಿಗೆ ಸಹಾಯ ಮಾಡುವನು. ೧೦ ನಾನು ಆಕೆಗೆ ನೆರವಾಗುವೆನು. ೧೧ ಅವರು ನಿಮ್ಮ ಶಿಫಾರಸು ಮಾಡುವರು. ೧೨ ನೀನು ಗೋಡೆಯನ್ನು ಏರುತ್ತಿದ್ದಿ. ೧೩ ತೋಟಗನು ಗಿಡಗಳಿಗೆ ನೀರು ಹಾಕುವನು. ೧೪ ಈ ಕೂಸು ನಿನ್ನ ಮನರಂಜಿಸುವದು. ೧೫ ನಾನು ನಿನಗೆ ಮನಗಾಣಿಸುವೆನು. ೧೬ ಅವಳು ನಿನ್ನ ಮೇಲೆ ಪ್ರೀತಿ ಮಾಡುತ್ತಾಳೆ. ೧೭ ಅವರು ಪ್ರಾರ್ಥಿಸುತ್ತಿದ್ದರು. ೧೮ ನಾವು ದೇವರನ್ನು ಪೂಜಿಸುತ್ತೇವೆ. ೧೯ ತಂದೆಯು ತನ್ನ ಮಗನಿಗೆ ಮುದ್ದು ಕೊಡುತ್ತಾನೆ. ೨೦ ಒಬ್ಬ ಮನುಷ್ಯನು ಅವನ ಮನೆಯ ಬಾಗಿಲಿಗೆ ಬಣ್ಣ ಹಚ್ಚುತ್ತಿದ್ದನು. ೨೧ ಈ ಹುಡುಗನು ನನ್ನೊಡನೆ ವಾದಿಸುತ್ತಾನೆ. ೨೨ ನೀವು ಅವರನ್ನು ಸ್ತುತಿಸುತ್ತೀರಿ. ೨೩ ಅವನು ಆಣೆ ಮಾಡುತ್ತಾನೆ. ೨೪ ಅರಸನಿಗೆ ಕಿರೀಟವು ಒಪ್ಪುತ್ತದೆ. ೨೫ ನನಗೆ ಪುಸ್ತಕ ಬೇಕು.



# ೨ ನೇ ಪಾಠ.

## ಕ್ರಿಯಾಪದಗಳ ನಿಷೇಧರೂಪ.

## Negative Forms Of Verbs.

೭ ಕ್ರಿಯಾಪದಗಳ ನಿಷೇಧರೂಪವನ್ನು ಮಾಡುವದಾದರೆ, not ( ಇಲ್ಲ, ಅಲ್ಲ ) ಎಂಬ ಕ್ರಿಯಾವಿಶೇಷಣವನ್ನಾಗಲಿ, no (ಯಾರೂ–ಏನೂ ಇಲ್ಲ) ಎಂಬ ವಿಶೇಷಣವನ್ನಾಗಲಿ ಪ ಯೋಗಿಸಬೇಕು.

೮ ಅಪೂರ್ಣ ವರ್ತಮಾನ, ಅಪೂರ್ಣ ಭೂತ ಭವಿಷ್ಯತ್ಕಾಲಗಳ ಹಾಗೆ ಸಹಾಯ ಕ್ರಿಯಾಪದಗಳಿಂದ, ಸಿದ್ಧವಾಗುವಂಥ ಕಾಲಗಳ ನಿಷೇಧರೂಪವನ್ನು ಮಾಡುವದಾದರೆ, not ಎಂಬ ಶಬ್ದವನ್ನು ಸಹಾಯ ಕ್ರಿಯಾಪದಕ್ಕೂ ಮುಖ್ಯ ಕ್ರಿಯಾಪದಕ್ಕೂ ನಡುವೆ ಹಾಕಬೇಕು.

ಉದಾ:—He is *not* coming — ಅವನು ಬರುತ್ತ ಇರುವದಿಲ್ಲ.
He was *not* coming — ಅವನು ಬರುತ್ತಿದ್ದಿಲ್ಲ.
He will *not* come — ಅವನು ಬರಲಿಕ್ಕಿಲ್ಲ.

### ೯ ಶಬ್ದಸಂಗ್ರಹ ೨.

To hurt ನೋಯಿಸು, ಹಿಂಸಿಸು.
To whip ಚಬಕದಿಂದ ಹೊಡಿ.
To tear ಹರಿ.
To drive { ೧ (ಬಂಡಿ,ರಥ) ಹೊಡಿ, ಸಾಗಿಸು; ೨ ಹೊಡೆದುಕೊಂಡು ಹೋಗು.
To creep, To crawl { ಹರಿದಾಡು, ಹೊಟ್ಟೆಹೊಸಿ, ಅಂಬೆಗಾಲಿಕ್ಕು.
Wind ಗಾಳಿ.
A bat'tle ಕಾಳಗ, ಯುದ್ಧ.
A trum'pet ತುತೂರಿ.
A car'riage ರಥ.

To blow ೧ (ಗಾಳಿ) ಬೀಸು; ಊದು.
To shake ಅಲ್ಲಾಡಿಸು, ಕುಲಕಿಸು.
To con'quer { ಕೈವಶ ಮಾಡಿಕೊಳ್ಳು, ಜಯಿಸು.
To lose ಹೋಗಲಾಡಿಸು, ಕಳಕೊಳ್ಳು.
To touch ಮುಟ್ಟು.
The touch ಸ್ಪರ್ಶ.
A lamp, A light } ದೀಪ, ಬೆಳಕು.
To light { ೧ ದೀಪ ಹಚ್ಚು. ೨ ಬೆಳಕು ಮಾಡು.

A wax'can-dle ಮೇಣಬತ್ತಿ.
A coach'man } ಸಾರಥಿ, ಬಂಡಿ ಹೊಡೆಯುವವ,
A cart' man } ಗಾಡಿಕಾರ.
A piece } ತುಂಡು, ಚೂರು,
A bit } ತುಣುಕು.
To be-lieve' ನಂಬು.
To for-get' ಮರೆ.
ಬಂಡಿ, ಗಾಡಿ, ಚಕ್ಕಡಿ a cart.
ಕಂದೀಲು, ಲಾಂದರು a lan'tern.

## ಭಾಷಾಂತರಪಾಠ ೨.

೧೦ 1 The wind was *not* blowing. 2 He was blowing a trumpet. 3 That child does *not* creep. 4 He will *not* tear my coat. 5 The dogs were *not* barking. 6 He will *not* forget my friends. 7 You are *not* studying. 8 You will win the battle. 9 They will conquer your country. 10 He will *not* win the money. 11 You will lose your money. 12 He will whip that disobedient boy. 13 The coachman will drive our carriage. 14 You are *not* lighting the lamps. 15 The servant will light these candles. 16 He will *not* touch your money. 17 I want a light. 18 This candle will *not* burn. 19 The child is burning that piece of paper. 20 You Will shake my table. 21 We will *not* eat unripe fuit. 22 The ship is *not* sinking. 23 It will *not* hurt your fingers. 24 The boys Were *not* learning their lessons. 25 My father will *not* call the husbandman's daguhter.

೧ ನೀನು ಓದುತ್ತಿದ್ದಿಲ್ಲ. ೨ ಆ ಹೆಣ್ಣುಮಕ್ಕಳು ಉಣ್ಣೇ ಹಿಂಜುವದಿಲ್ಲ. ೩ ನಾನು ಹೂ ಕೊಯ್ಯುವದಿಲ್ಲ. ೪ ಕೂಸು ಅಳುತ್ತಿದ್ದಿಲ್ಲ. ೫ ನಾನು ಮೊಳಕಾಲೂರುತ್ತಿದ್ದಿಲ್ಲ. ೬ ಅವರು ಕಾಳಗವನ್ನು ಗೆಲ್ಲುವರು. ೭ ನೀವು ಕುಣಿಯುತ್ತಿದ್ದಿಲ್ಲ. ೮ ಅವನು ಕಲಿಯಲಿಕ್ಕಿಲ್ಲ. ೯ ಅವರು ಜಗಳಾಡಲಿಕ್ಕಿಲ್ಲ. ೧೦ ಬಂಡಿಯು ಬರುತ್ತಲಿದೆ. ೧೧ ಅದು ನನ್ನ ಲಾಂದರು ಅದೆ. ೧೨ ನಾನು ಮಾತಾಡುತ್ತಿದ್ದಿಲ್ಲ. ೧೩ ಒಕ್ಕಲಿಗನು ಹೊಲದಲ್ಲಿ ನೇಗಲು ಹೊಡೆಯುತ್ತಿದ್ದಿಲ್ಲ. ೧೪ ಆಕಳ ಕೋಡುಗಳು ಕರುವನ್ನು ನೋಯಿಸಲಿಕ್ಕಿಲ್ಲ. ೧೫ ಕೂಸು ಅಂಬೇಗಾಲಿಕ್ಕುತ್ತಿದೆ. ೧೬ ಗಾಳಿ ಬೀಸುವದಿಲ್ಲ. ೧೭ ಬಂಡಿ

ಯವನು ಎತ್ತುಗಳನ್ನು ಹೊಡಿಯುತ್ತಾ ಇದ್ದಾನೆ. ೧೮ ನಾನು ಆ ಪಕ್ಷಿಯನ್ನು ಹಿಡಿಯುತ್ತಿದ್ದಿಲ್ಲ. ೧೯ ಅವನು ಕೆಲಸ ಮಾಡಲಿಕ್ಕಿಲ್ಲ. ೨೦ ಸಾರಥಿಯು ಕುದುರೆಗಳನ್ನು ಚಬಕದಿಂದ ಹೊಡೆಯುತ್ತಲಿದ್ದಾನೆ. ೨೧ ನಾನು ಆ ಪುಸ್ತಕ ವನ್ನು ಕಳಕೊಳ್ಳಲಿಕ್ಕಿಲ್ಲ. ೨೨ ನೀನು ಆ ರೊಕ್ಕಾ (ದುಡ್ಡು) ಕಳಕೊಳ್ಳುವಿ. ೨೩ ಅವನು ಜಾಗ್ರತೆಯುಳ್ಳವನಾಗಲಿಕ್ಕಿಲ್ಲ. ೨೪ ನೀನು ದುಃಖದಲ್ಲಿರಲಿಕ್ಕಿಲ್ಲ. ೨೫ ನನ್ನ ಹಳೇ ಮುಂಡಾಸು ಹಸರು ಬಣ್ಣದ್ದಿತ್ತು.

---

## ೩ ನೇ ಪಾಠ.

### ಕ್ರಿಯಾಪದಗಳ ನಿಷೇಧರೂಪ (ಮುಂದೆ ಸಾಗಿದ್ದು).

### Negative Forms of Verbs (Continued).

೧೧ ವರ್ತಮಾನಕಾಲದ ಹಾಗೆ ಸಹಾಯ ಕ್ರಿಯಾಪದಗಳು ಹತ್ತದಂಥ ಕಾಲಗಳ ನಿಷೇಧರೂಪವನ್ನು ಮಾಡುವದಾದರೆ, do ಎಂಬ ಸಹಾಯ ಕ್ರಿಯಾ ಪದವನ್ನು ಪ್ರಯೋಗಿಸಿ[1], ಅದಕ್ಕೂ ಮುಖ್ಯ ಕ್ರಿಯಾಪದಕ್ಕೂ ನಡುವೆ not ಎಂಬ ಶಬ್ದವನ್ನು ಹಾಕಬೇಕು.

To write ಎಂಬದರ ವರ್ತಮಾನಕಾಲ ನಿಷೇಧರೂಪ. ಉದಾ—

**ಏಕವಚನ.**

| | | |
|---|---|---|
| 1 | I do not write[2] | ನಾನು ಬರೆಯುವದಿಲ್ಲ. |
| 2 | Thou doest[3] not write | ನೀನು ಬರೆಯುವದಿಲ್ಲ. |
| 3 | He, She, It does not write | ಅವನು; ಅವಳು ಅದು ಬರೆಯುವದಿಲ್ಲ. |

---

1) ಕವಿತೆಯಲ್ಲಿ do ಎಂಬ ಸಹಾಯ ಕ್ರಿಯಾಪದವು ಬಹುತರವಾಗಿ ಬೇಕಾಗುವದೇ ಇಲ್ಲ. ಅಲಂಕಾರಿಕ ಭಾಷೆಯಲ್ಲಿ ಸಹ ಒಮ್ಮೊಮ್ಮೆ ಅದು ಅವಶ್ಯವಿರುವದಿಲ್ಲ. ಆಗ not ಎಂಬ ಶಬ್ದವನ್ನು ಮಾತ್ರ ಕ್ರಿಯಾಪದದ ಮುಂದೆ ಹಾಕುತ್ತಾರೆ. ಉದಾ:—He comes not ಅವನು ಬರುವದಿಲ್ಲ.

2) I am not writing ಮತ್ತು I do not write ಎಂಬ ವಾಕ್ಯಗಳ ಭಾಷಾಂತರವು ಸಮವಾಗಿ 'ನಾನು ಬರೆಯುತ್ತ ಇರುವದಿಲ್ಲ' 'ನಾನು ಬರೆಯುವದಿಲ್ಲ' ಎಂತ ಆಗುತ್ತದೆ.

3) ಪುಸ್ತಕ ೧, ಪುಟ ೨೭, ಟಿಪ್ಪಣೆ 2 ನೋಡು.

ಬಹುವಚನ.

1 We do not write ನಾವು ಬರೆಯುವದಿಲ್ಲ.
2 You do not write ನೀವು ಬರೆಯುವದಿಲ್ಲ.
3 They do not write ಅವರು, ಅವು ಬರೆಯುವದಿಲ್ಲ.

೧೨ ಶಬ್ದಸಂಗ್ರಹ ೩.

| | | | |
|---|---|---|---|
| To cov'er | ಆಚ್ಛಾದಿಸು, ಮುಚ್ಚು. | To ope'n | ತೆರೆ. |
| To un-cover | { ೧ ಆಚ್ಛಾದನ ತೆಗೆ, ತೆರೆ; ೨ ಟೊಪ್ಪಿಗೆ ತೆಗೆ. | A hindu | ಹಿಂದು ಮನುಷ್ಯ. |
| Alive[1] / Live / Livi'ng | } ಜೀವವುಳ್ಳ, ಸಜೀವ. | The bo'dy | ಶರೀರ, ಮೈ. |
| | | A gate[2] | ಅಗಸೀಬಾಗಿಲು, ಹೆಬ್ಬಾಗಿಲು. |
| | | Dead | ಸತ್ತಂಥ. |
| ಹುಗಿ, ಹೂಳು | to bu'ry. | ಹೆಣ | a corpse. |

ಭಾಷಾಂತರಪಾಠ ೩.

೧೩. 1 Hindus *do not* eat beef. 2 He *does not* read bad books. 3 The servant *does not* open the door. 4 A lion *does not* fear fox. 5 You *do not* obey my orders. 6 He is covering the body of his dead father. 7 We *do not* uncover our heads. 8 You do not open[3] the letters. 9 He *does not* open his book. 10 We *do not* shut the gate of the city. 11 He was shutting the gate of the garden.

೧. ಕೆಲವು ಹಿಂದೂ ಜನರು ಸರಾಯಿ ಕುಡಿಯುವದಿಲ್ಲ. ೨. ಈ ಕೂಸು ಹಾಲು ಕುಡಿಯುವದಿಲ್ಲ. ೩. ನೀನು ಆಲೋಚನೆ ಮಾಡುವದಿಲ್ಲ. ೪. ಅವನು

---

1) Alive ಎಂಬ ವಿಶೇಷಣವು ನಾಮಪದದ ಮುಂದೆ ಬರುತ್ತದೆ; live ಎಂಬದು ನಾಮಪದದ ಹಿಂದೆ ಬರುತ್ತದೆ. living ಎಂಬದು ಮುಂದೆ ಆಗಲಿ, ಹಿಂದೆ ಆಗಲಿ ಬರಬಹುದು. ಉದಾ—

This animal is alive
This is a live animal
This is a living animal
This animal is living
} ಈ ಪ್ರಾಣಿಯು ಜೀವವುಳ್ಳದ್ದು. ಅಥವಾ, ಇದು ಜೀವವುಳ್ಳ ಪ್ರಾಣಿಯು.

2) ಮನೆಯ ಬಾಗಿಲಿಗೆ door, ಮತ್ತು ಪಟ್ಟಣದೊಳಗಾಗಲಿ ಹಳ್ಳಿಯೊಳಗಾಗಲಿ ತೋಟದೊಳಗಾಗಲಿ ಹೋಗುವ ದೊಡ್ಡ ಬಾಗಿಲಿಗೆ gate ಅನ್ನುತ್ತಾರೆ. 3) Open a letter ಪತ್ರ ಒಡೆ.

ನನ್ನ ಪತ್ರಗಳನ್ನು ಒಡೆಯುವದಿಲ್ಲ[1]. ೫. ನಾನು ನನ್ನ ತಪ್ಪುಗಳನ್ನು ಮುಚ್ಚಿಕೊಳ್ಳುವದಿಲ್ಲ. ೬. ನೀನು ನಿನ್ನ ಕೈಗಳನ್ನು ತೊಳಕೊಳ್ಳುವದಿಲ್ಲ. ೭. ಅವರು ಪ್ರಾರ್ಥಿಸುವದಿಲ್ಲ. ೮. ಅವನು ಕೇಳುವದಿಲ್ಲ ೯. ಕೆಲವು ಜನರು ಜೀವವುಳ್ಳ ಪ್ರಾಣಿಗಳನ್ನು ಕೊಲ್ಲುವದಿಲ್ಲ. ೧೦. ಅವನ ಗೆಳೆಯರು ಅವನಿಗೆ ಸಹಾಯ ಮಾಡುವದಿಲ್ಲ. ೧೧. ವ್ಯಾಪಾರವು ಚನ್ನಾಗಿ ನಡೆಯುವದಿಲ್ಲ[2]. ೧೨. ಕೆಟ್ಟ ಹುಡುಗರು ತಮ್ಮ ತಂದೆತಾಯಿಗಳ ಮಾತು ಕೇಳುವದಿಲ್ಲ. ೧೩. ಹಲವು ಜನರು ತಮ್ಮ ದೇಶದ ಮೇಲೆ ಪ್ರೀತಿ ಮಾಡುವದಿಲ್ಲ. ೧೪. ನಾನು ಸೇವಕನನ್ನು ದೂಷಿಸುವದಿಲ್ಲ. ೧೫. ಅವನು ಹುಲಿಗೆ ಅಂಜುವದಿಲ್ಲ. ೧೬. ಕೆಲ ಹಿಂದುಗಳು ಹೆಣಗಳನ್ನು ಹುಗಿಯುವದಿಲ್ಲ.

---

## ೮ ನೇ ಪಾಠ.

### *To be* ಎಂಬ ಕ್ರಿಯಾಪದದ ನಿಷೇಧರೂಪ.

### The Negative Forms of the Verb 'To be'.

೧೪. ವರ್ತಮಾನ ಭೂತಕಾಲಗಳಲ್ಲಿ To be ಎಂಬ ಕ್ರಿಯಾಪದದ ನಿಷೇಧರೂಪವನ್ನು ಮಾಡುವದಾದರೆ, not ಎಂಬ ಶಬ್ದವನ್ನು ಅದರ ಮುಂದೆ ಹಾಕಬೇಕು. ಉದಾ:—

| | |
|---|---|
| He is not happy | ಅವನು ಸೌಖ್ಯದಿಂದಿಲ್ಲ. |
| He was not happy | ಅವನು ಸೌಖ್ಯದಿಂದಿದ್ದಿಲ್ಲ. |
| I am not the man | ನಾನು ಆ ಮನುಷ್ಯನಲ್ಲ. |
| It is not my book | ಅದು ನನ್ನ ಪುಸ್ತಕವಲ್ಲ. |
| This is not Rama's book | ಇದು ರಾಮನ ಪುಸ್ತಕವಲ್ಲ. |

೧೫. To be ಎಂಬದರ ಮುಂದೆ ಬರೇ ನಾಮಪದವು ಬಂದು ಅದರಿಂದ ಯಾವನಾದರೊಬ್ಬನ ಕಸಬು ಅಥವಾ ಉದ್ಯೋಗ ಗೊತ್ತಾಗುತ್ತಿದ್ದರೆ, not ಎಂಬ ಕ್ರಿಯಾವಿಶೇಷಣಕ್ಕೆ ಬದಲಾಗಿ no ಎಂಬ ವಿಶೇಷಣವನ್ನು ಸಹ ಹಾಕುವ ವಾಡಿಕೆಯುಂಟು.

ಉದಾ—He is not a soldier.
ಅಥವಾ:-He is no soldier.

---

1) Does not open. 2) The trade is not flourshing

ಆದರೆ ಈ ಎರಡೂ ವಾಕ್ಯಗಳ ಅರ್ಥ ಒಂದೇ ಅಲ್ಲ. ಮೊದಲನೇ ವಾಕ್ಯದ ಅರ್ಥ ಅವನು ಸಿಪಾಯಿಯಾಗಿಯುಲ್ಲ; ಅಂದರೆ ಅವನು ಸಿಪಾಯಿಯು ಕೆಲಸ ಮಾಡುವವನಲ್ಲ. ಎರಡನೇ ವಾಕ್ಯದ ಅರ್ಥ ಅವನು ಮೇಲಾದ ಸಿಪಾಯಿಯಾಗಿಯುಲ್ಲ; ಅಂದರೆ ಅವನಲ್ಲಿ ಸಿಪಾಯಿಗೆ ಇರತಕ್ಕಷ್ಟು ಶೌರ್ಯವಿಲ್ಲ.

## ೧೬ ಶಬ್ದಸಂಗ್ರಹ ೪.

| | | | |
|---|---|---|---|
| Pure | ಶುದ್ಧ, ನಿರ್ಮಲ. | Col'our-less | ವರ್ಣಹೀನ, ಬಣ್ಣವಿಲ್ಲದ. |
| Impure' | ಅಶುದ್ಧ, ಮಲಿನ. | Well[3] | ಸ್ವಸ್ಥವಾಗಿ, ಚನ್ನಾಗಿ, ಕ್ಷೇಮದಿಂದ |
| Taste'less | ರುಚಿಯಿಲ್ಲದ. | Un-well' | ಬೇನೆಯುಳ್ಳ, ಅಸ್ವಸ್ಥ. |
| O'dour-less | ವಾಸನೆಯಿಲ್ಲದ. | Wealthy | ಹಣವುಳ್ಳ, ಶ್ರೀಮಂತ. |
| Often[1] | ಆಗಾಗ್ಗೆ, ಬಾರಿಬಾರಿಗೆ. | Waist'coat | ಕಬಚ. |
| Fat | ಪುಷ್ಟ, ಕೊಬ್ಬಿದ. | Hon'est | ಪ್ರಾಮಾಣಿಕ. |
| Lean | ಬಡಕ, ಸೊರಗಿದ. | Dis-honest | ಅಪ್ರಾಮಾಣಿಕ. |
| Praise | ಸ್ತೋತ್ರ, ಹೊಗಳಿಕೆ. | Blame | ದೋಷ. |
| Guilt | ತಪ್ಪು, ಸದೋಷತೆ. | A mer'chant | ವರ್ತಕ, ವ್ಯಾಪಾರಸ್ಥ. |
| A pro'fit | ಲಾಭ. | A neigh'bour | ನೆರೆಯವ. |
| Loss | ಕೇಡು, ಹಾನಿ, ನಷ್ಟ. | A ra'zor | (ಕ್ಷೌರ) ಕತ್ತಿ. |
| A re-ward[2] / A prize | ಇನಾಮು. | News[4] | ಸುದ್ದಿ, ವರ್ತಮಾನ. |
| To get | ದೊರಕಿಸು. | Riches[3] | ದ್ರವ್ಯ, ಧನ. |
| To bear | ೧ ಹೊರು, ೨ ತಾಳು. | Wealth | ಸಂಪತ್ತು, ಐಶ್ವರ್ಯ. |
| A thim'ble | ಅಂಗುಸ್ತಾನ. | Guilty | ದೋಷವುಳ್ಳ, ಅಪರಾಧಿ. |

1) ಈ ಶಬ್ದದೊಳಗಿನ t ದ ಉಚ್ಚಾರವಾಗುವದಿಲ್ಲ. 2) Reward ಅಂದರೆ ಉತ್ತಮ ರೀತಿಯಿಂದ ಸೇವೆ ಮಾಡಿದ್ದರಿಂದಾಗಲಿ, ಪರರ ಮೇಲೆ ಉಪಕಾರ ಮಾಡಿದ್ದರಿಂದಾಗಲಿ ದೊರಕಿಸಿದ ಇನಾಮು. Prize ಅಂದರೆ ಯುದ್ಧದಲ್ಲಿ ಅಥವಾ ಯಾವದಾದರೊಂದು ಹೋರಾಟದ ಇಲ್ಲವೆ ಮೇಲಾಟದ ಕೆಲಸದಲ್ಲಿ ಹೆಚ್ಚು ಯೋಗ್ಯತೆಯನ್ನು ತೋರಿಸಿ ಸಂಪಾದಿಸಿದ ಇನಾಮು. 3) Well ಎಂಬ ಶಬ್ದವನ್ನು "ಕ್ಷೇಮದಿಂದ, ನೆಟ್ಟಗೆ, ಚನ್ನಾಗಿ" ಎಂಬ ಅರ್ಥದ ಬಗ್ಗೆ ಬೇಕಾದಲ್ಲಿ ಉಪಯೋಗಿಸಬಹುದು. ಆದರೆ Unwell ಎಂಬ ಶಬ್ದವನ್ನು ಶರೀರ ಪ್ರಕೃತಿಗೆ ಮಾತ್ರ ಹಚ್ಚುತ್ತಾರೆ ಈ ಎರಡೂ ಶಬ್ದಗಳು ಕ್ರಿಯಾಪದದ ಮುಂದೆ ಇರುತ್ತವೆ.

## ಭಾಷಾಂತರಪಾಠ ೪.

೧೭. 1. His garden is *not* beautiful. 2. His uncle is unwell. 3. Our house is *not* large. 4. Pure water is tasteless. 5. It is colourless and odourless. 6. He will bring good news. 7. This is bad news. 8. He is *not* a wealthy man. 9. Our neighbour is *not* a good man. 10. It is *not* your fault. 11. Your son will *not* win the prize. 12. The good man will get a reward. 13. The merchant will get profit. 14. Riches often increase care. 15. He will bear the blame. 16. You are *not* guilty. 17. He is *not* a carpentar. 18. He is *no* carpenter. 19. That man is *not* a gardener. 20. This is *not* the house. 21. It is *not* a lion. 22. It is *not* your waistcoat. 23. The water of your well is *not* pure. 24. The boy is *not* fat, 25. This is *not* pure gold.

೧ ಅವನ ಮಕ್ಕಳು ಉದ್ಯೋಗಿಗಳಲ್ಲ. ೨ ಈ (ಕ್ಷೌರ) ಕತ್ತಿಯು ಹದನವಿಲ್ಲ. ೩ ಅದು ಮೊಂಡವದೆ. ೪ ನಿನ್ನ ಚಾಕು ಮೊಂಡವಿಲ್ಲ. ೫ ಕೆಲ ಪುರುಷರು ದಿಟ್ಟರಿರುವದಿಲ್ಲ. ೬ ಕೆಲವು ಹುಡುಗರು ಅಂಜುಬುರುಕರಿರುವದಿಲ್ಲ. ೭ ಆ ಹಣ್ಣುಗಳು ಕಸಕಲ್ಲ. ೮ ಕೆಲವು ಹಣ್ಣುಗಳು ಕಹಿ ಇರುವದಿಲ್ಲ. ೯ ಕೆಲವು ಜನರು ಕೊಬ್ಬಿರುತ್ತಾರೆ, ಕೆಲವರು ಕೊಬ್ಬಿರುವದಿಲ್ಲ. ೧೦ ಕೆಲ ಹರೆಯದವರು ಸಾಯುತ್ತಾರೆ. ೧೧ ಅವನು ತನ್ನ ಮೋರೆಯನ್ನು ತೋರಿಸುವದಿಲ್ಲ. ೧೨ ನಾನು ವರ್ತಕನಲ್ಲ. ೧೩ ಆ ವರ್ತಕನು ಪ್ರಾಮಾಣಿಕನಲ್ಲ. ೧೪ ಅವನ ನೆರೆಯವನು ಪ್ರಾಮಾಣಿಕನಿದ್ದಾನೆ. ೧೫ ಆಕೆಯ ಗಂಡನು ಗರ್ವಿಷ್ಠನು. ೧೬ ಕೆಲವು ಶ್ರೀಮಂತ ಜನರು ಪ್ರಾಮಾಣಿಕರಿರುವದಿಲ್ಲ. ೧೭ ಎಷ್ಟೋ ಮಂದಿ ಬಡವರು ಸುಖದಿಂದಿರುತ್ತಾರೆ. ೧೮ ಇದು ನನ್ನ ಮುಂಡಾಸಲ್ಲ. ೧೯ ಈ ಮುಂಡಾಸು ನನ್ನದಲ್ಲ. ೨೦ ಅವನು ನನ್ನ ಗೆಳೆಯನಲ್ಲ. ೨೧ ಇದು ಆ

---

4) News ಎಂಬ ಶಬ್ದವು ಬಹುವಚನದಲ್ಲಿದ್ದು ಅದನ್ನು ಏಕವಚನದಂತೆ ಪ್ರಯೋಗಿಸುತ್ತಾರೆ. ಅದನ್ನು ಉಪಪದವಿಲ್ಲದೆ ಪ್ರಯೋಗಿಸಬಹುದು; ಉಪಪದವು ಬೇಕಾದರೆ the ಮಾತ್ರ ಹಚ್ಚಬಹುದು. 5) Riches ಎಂಬ ಶಬ್ದವು ಏಕವಚನದಲ್ಲಿದ್ದು ಅದನ್ನು ಬಹುವಚನದಂತೆ ಪ್ರಯೋಗಿಸುತ್ತಾರೆ.

ಅಂಗಡಿಯಲ್ಲ. ೨೨ ಈ ಲೆಕ್ಕಣಿಕೆ ಸಣ್ಣದಲ್ಲ. ೨೩ ಇದು ಪಕ್ಷಿಯ ಗೂಡಲ್ಲ. ೨೪ ಅವರು ಯುದ್ಧ ಮಾಡುತ್ತಿದ್ದಿಲ್ಲ. ೨೫ ನಾವು ನಿನ್ನನ್ನು ಸಂರಕ್ಷಿಸಲಿಕ್ಕಿಲ್ಲ.

## ೫ ನೆಯ ಪಾಠ.

### *To have* ಎಂಬ ಕ್ರಿಯಾಪದದ ನಿಷೇಧಾರ್ಥ

### The Negative Form of the Verb 'To have'

೧೮ ವರ್ತಮಾನ ಭೂತಕಾಲಗಳಲ್ಲಿ To have ಎಂಬ ಕ್ರಿಯಾಪದದ ನಿಷೇಧಾರ್ಥವನ್ನು ಮಾಡುವದಾದರೆ no ಎಂಬ ಶಬ್ದವನ್ನು ಪ್ರಯೋಗಿಸಬೇಕು.

ಉದಾ—He has *no* book ಅವನ ಬಳಿಯಲ್ಲಿ ಪುಸ್ತಕವಿಲ್ಲ.

೧೯ ಆದರೆ ಕರ್ಮಪದದ ಅರ್ಥವನ್ನು ವಿಶೇಷಿಸುವಂಥ ಶಬ್ದವು ಕರ್ಮದ ಹಿಂದೆ ಇದ್ದರೆ, ಬಹುತರವಾಗಿ not ಎಂಬ ಶಬ್ದವನ್ನು ಪ್ರಯೋಗಿಸಬೇಕಾಗುತ್ತದೆ.

ಉದಾ— I have *not* your book ನನ್ನ ಹತ್ತರ ನಿನ್ನ ಪುಸ್ತಕವಿಲ್ಲ.

೨೦ ರೂಢಿಯೊಳಗಿನ ಭಾಷೆಯಲ್ಲಿ To have ಎಂಬ ಕ್ರಿಯಾಪದದ ವರ್ತಮಾನ ಭೂತಕಾಲಗಳ ಮುಂದೆ ನಿಶ್ಚಯಾರ್ಥವಲ್ಲಿಯೂ ನಿಷೇಧಾರ್ಥದಲ್ಲಿಯೂ got ಎಂಬ ಶಬ್ದವನ್ನು ಹಾಕುವ ವಾಡಿಕೆಯುಂಟು. Got ಇದು to get ಎಂಬ ಧಾತುವಿನ ಭೂತಕೃದ್ವಾಚಕವು. ಈ ಶಬ್ದದ ಅರ್ಥವು 'ದೊರಕಿಸಿದ' ಎಂತ ಆಗುತ್ತದೆ; ಆದರೆ ಇದು to have ದ ಮುಂದೆ ಬರಲಾಗಿ ಇದರ ಅರ್ಥವೇ ಆಗುವದಿಲ್ಲ. To have ಮತ್ತು to have got ಇವುಗಳ ಅರ್ಥ 'ಬಳಿಯಲ್ಲಿರು' ಹತ್ತರ ಇರು (ಸ್ವಾಧೀನದಲ್ಲಿ ಇರು) ಎಂತ ಆಗುತ್ತದೆ.

ಉದಾ— I *have* no corn.
ಅಥವಾ I *have* got no corn } ನನ್ನ ಬಳಿಯಲ್ಲಿ ಕಾಳು ಇಲ್ಲ.

ಉದಾ— I *have* not Rama's book,
ಅಥವಾ I *have* not got Rama's book } ನನ್ನ ಹತ್ತರ ರಾಮನ ಪುಸ್ತಕವಿಲ್ಲ.

### ೨೧ ಶಬ್ದ ಸಂಗ್ರಹ ೫.

| | | | |
|---|---|---|---|
| Virtue | ಸದ್ಗುಣ. | People | ಜನರು. |
| Vice | ದುರ್ಗುಣ. | A shep herd[1] | ಕುರುಬ. |
| A pin | ಟಾಚಣಿ | A nee'dle | ಸೂಜಿ. |
| Vir'tuous | ಸದು ಣವುಳ್ಳ, ಸದ್ಗುಣಿ. | Wic'ked | ದುಷ್ಟ. |
| Vi'cious[2] | { ದುರಾಚಾರಿಯಾದ, ದುರಾಚಾರಿ. | To re-'ward' | { ಇನಾಮು ಕೊಡು, ಪ್ರತಿಫಲ ಕೊಡು. |
| Use ful | ಉಪಯೋಗವುಳ್ಳ. | Useless | { ಉಪಯೋಗವಿಲ್ಲದ, ನಿಷ್ಪ್ರಯೋಜಕ. |
| ಸಲಿಗೆಯುಳ್ಳ, ಅತಿ ಪರಿಚಿತ } | in ti-mate | ನೀರಡಿಸಿದ | thirst'y. |
| ತಿಳಿಸು, ತಿಳುವಳಿಕೆಕೊಡು } | to intimate | ಹಾಲು ಕೊಡು (ಆಕಳು, ಎಮ್ಮೆ) | } to give milk. |
| ಹಸಿದ | hun'gry | ಹಾಲು ಕರೆ | to milk. |

### ಭಾಷಾಂತರಪಾಠ ೫.

೨೨. 1. The sheep have *no* shepherd. 2. He has *no* sister 3. Pure water has *no* taste. 4. You have *no* ruler. 5. You have *no* needles and pins. 6. This lamp has *no* oil. 7. Some flowers have *no* smell. 8. The barber has *not* sharp razor. 9. God rewards virtuous persons. 10. He punishes wicked people. 11. They have *no* horses. 12. I have *no* friends. 13. I have got *no* money. 14. I have *not* got your. pen-knife. 15. The rice merchant has *no* son. 16. You will get *no* profit. 17. This ink is useless. 18. I have got a piece of paper. 19. You have got many useful books. 20. You have got a wealthy neighbour.

೧ ಗುರುಗಳು ದುಷ್ಟ ಹುಡುಗರನ್ನು ಶಿಕ್ಷಿಸುತ್ತಾರೆ. ೨ ನನ್ನ ಹತ್ತರ ಟಾಚಣಿ ಇಲ್ಲ. ೩ ನನ್ನ ಹತ್ತರ ಟಾಚಣಿಗಳಿಲ್ಲ. ೪ ನಿಮ್ಮ ಮನೆಗೆ ದೊಡ್ಡ ಬಾಗಿಲುಗಳಿಲ್ಲ. ೫ ಅವನ ಹತ್ತರ ದೌತಿ ಇಲ್ಲ. ೬ ನನ್ನ ಹತ್ತರ ನಿನ್ನ

1) ಈ ಶಬ್ದದೊಳಗಿನ ಎರಡನೇ h ದ ಉಚ್ಚಾರವಾಗುವದಿಲ್ಲ. ಇದನ್ನು "ಶಪರ್ಡ್" ಎಂತ ಉಚ್ಚರಿಸಬೇಕು. 2) Cious ಮತ್ತು tious ಇವುಗಳ ಉಚ್ಚಾರ 'ಶಸ್' ಆಗುತ್ತದೆ.

ಅಂಗಿ ಇಲ್ಲ. ೭ ನನ್ನ ಹತ್ತರ ನಿನ್ನ ಹಳೇ ಕೊಡೆ ಇಲ್ಲ. ೮ ನಿನ್ನ ಹತ್ತರ ನನ್ನ ಹೊಸ ಪುಸ್ತಕವುಂಟು. ೯ ಅವನಲ್ಲಿ ಐದು ಆಕಳುಗಳುಂಟು. ೧೦ ಅವನ ಹತ್ತರ ನಿನ್ನ ಪುಸ್ತಕಗಳಿಲ್ಲ. ೧೧ ಅವಳ ಹತ್ತರ ಸೂಜಿಗಳಿಲ್ಲ ೧೨ ವನು ನಮ್ಮ ಜೀವದ[1] ಗೆಳೆಯನಲ್ಲ. ೧೩ ಅವನು ನಂಬಿಗೆಯುಳ್ಳ ಸೇವಕನಲ್ಲ. ೧೪ ಇದು ಅವನ ಅಂಗಡಿಯಲ್ಲ. ೧೫ ಆ ಗಿಡಕ್ಕೆ ಎಲೆಗಳಿಲ್ಲ. ೧೬ ಅವನಿಗೆ ಹೆಣ್ಣು ಮಕ್ಕಳಿಲ್ಲ. ೧೭ ಆ ಬಡ ಮನುಷ್ಯನಿಗೆ ಗುಡಿಸಲಿಲ್ಲ. ೧೮ ಆ ಮನೆಗೆ ಗಟ್ಟಿಯಾದ (ಭದ್ರವಾದ) ಗೋಡೆಗಳಿಲ್ಲ. ೧೯ ಅದಕ್ಕೆ ದೊಡ್ಡ ಕಿಡಕಿಗಳಿಲ್ಲ. ೨೦ ಆ ಆಕಳು ಹಿಂಡುವದಿಲ್ಲ[2]. ೨೧ ಆ ಕುರುಡ ಹುಡುಗನಿಗೆ ತಂದೆತಾಯಿಗಳಿಲ್ಲ. ೨೨ ನಾನು ಹಸಿದಿಲ್ಲ. ೨೩ ಅವನು ನೀರಡಿಸಿದ್ದಿಲ್ಲ. ೨೪ ಸದ್ಗುಣಗಳುಳ್ಳವರು ಪಾಪ ಮಾಡುವದಿಲ್ಲ. ೨೫ ಅವನಿಗೆ ಇನಾಮು ಸಿಗಲಿಕ್ಕಿಲ್ಲ.

---

## ೬ ನೇ ಪಾಠ.

### ಪ್ರಶ್ನಾರ್ಥಕ ವಾಕ್ಯಗಳು.

### Interrogative Sentences.

೨೩ ಪ್ರಶ್ನವನ್ನು ಕೇಳುವದಾದರೆ, ವಾಕ್ಯದೊಳಗೆ ಸಹಾಯ ಕ್ರಿಯಾಪದ ಇದ್ದರೆ ಅದನ್ನು ಕರ್ತೃಪದದ ಪೂರ್ವದಲ್ಲಿಟ್ಟು ವಾಕ್ಯದ ಕೊನೆಗೆ ಪ್ರಶ್ನ ಚಿಹ್ನವನ್ನು ಹಾಕಬೇಕು.

ಉದಾ—*Is* he coming ? ಅವನು ಬರುತ್ತಿದ್ದಾನೋ ? (ಅವನು ಬರುತ್ತಾನೋ ?)
*Was* he coming ? ಅವನು ಬರುತ್ತಿದ್ದನೋ ?
*Will* he come ? ಅವನು ಬರುವನೋ ?

೨೪ ವರ್ತಮಾನಕಾಲದಲ್ಲಿಯೂ ಭೂತಕಾಲದಲ್ಲಿಯೂ ಸಹಾಯ ಕ್ರಿಯಾಪದವಿರುವದಿಲ್ಲವಾದ ಕಾರಣ, ಅಂಥಲ್ಲಿ do ಎಂಬ ಸಹಾಯ ಕ್ರಿಯಾಪದವನ್ನು ಪ್ರಯೋಗಿಸಿ ಅದನ್ನು ಕರ್ತೃಪದದ ಹಿಂದೆ ಇಡಬೇಕು.

ಉದಾ—*Does* he come ? ಅವನು ಬರುತ್ತಾನೋ ?
*Did* he come ? ಅವನು ಬಂದನೋ ?

೨೫ ವರ್ತಮಾನ ಭೂತಕಾಲಗಳಲ್ಲಿ to be, to have ಎಂಬ ಕ್ರಿಯಾಪದಗಳನ್ನು, ಪ್ರಶ್ನ ಕೇಳತಕ್ಕದ್ದಿದ್ದಾಗ, ಕರ್ತೃಪದದ ಪೂರ್ವದಲ್ಲಿಡಬೇಕು.

---

1) Intimate. 2) Is *not* in milk

ಉದಾ—*Is* he happy ? ಅವನು ಸೌಖ್ಯದಿಂದಿದ್ದಾನೋ ?
*Had* he a son ? ಅವನಿಗೆ ಮಗನಿದ್ದನೋ ?

೨೬ ಪ್ರಶ್ನಕ್ಕೆ ಹೌದು ಎಂಬ ಉತ್ತರವಿರಲಾಗಿ yes[1] ಅನ್ನಬೇಕು; ಇಲ್ಲ, ಅಲ್ಲ ಎಂಬದಿರಲಾಗಿ no ಅನ್ನಬೇಕು. ಇಂಥ ಸ್ಥಳಗಳಲ್ಲಿ no ಎಂಬದು ಕ್ರಿಯಾವಿಶೇಷಣವಿದ್ದು ಅದರ ಅರ್ಥವು ಇಲ್ಲ, ಅಲ್ಲ ಎಂತ ಆಗುತ್ತದೆ; ಆದರೆ ಹಿಂದಿನ ನಾಲ್ಕು ಪಾಠಗಳಲ್ಲಿ ಹೇಳಿದ no ಎಂಬ ಶಬ್ದವು ವಿಶೇಷಣವು.

೨೭ ಕನ್ನಡದಂತೆ ಇಂಗ್ಲಿಷದಲ್ಲಿ ಪ್ರಶ್ನಗಳನ್ನು ನಾಲ್ಕು ವಿಧವಾಗಿ ಪ್ರಯೋಗಿಸುವರು:—೧ ಸುದ್ದಿ ತಿಳುಕೊಳ್ಳುವದಕ್ಕಾಗಿ; ೨ ಬೇರೊಬ್ಬನ ಸಮ್ಮತಿ ಪಡಕೊಳ್ಳುವದಕ್ಕಾಗಿ; ೩ ಅಪ್ಪಣೆ ಕೇಳುವದಕ್ಕಾಗಿ; ೪ ಬಿನ್ನಹ ಮಾಡಿಕೊಳ್ಳುವದಕ್ಕಾಗಿ; ಅಥವಾ ಯಾವದಾದರೊಂದು ಕೆಲಸ ಮಾಡು ಎಂದು ಹೇಳುವದಕ್ಕಾಗಿ.

ಉದಾ—

೧ Is he swimming ? ಅವನು ಈಸುತ್ತಿದ್ದಾನೋ ?
೨ Are we not mortal ? ನಾವು ಮರಣಾಧೀನರಲ್ಲವೋ ?
೩ Shall I go ? ನಾನು ಹೋಗಲಾ ?
೪ Will you kindly go there ? ದಯಮಾಡಿ ಅಲ್ಲಿಗೆ ಹೋಗುತ್ತೀರಾ ?

☞ ನಾಲ್ಕನೇ ಕಾರ್ಯವನ್ನು ಕುರಿತು ಪ್ರಶ್ನ ಮಾಡುವಾಗ ಇಂಗ್ಲಿಷದಲ್ಲಿ ಭವಿಷ್ಯತ್ಕಾಲವನ್ನು ಹಾಕುತ್ತಾರೆ; ಆದರೆ ಕನ್ನಡದಲ್ಲಿ ಆ ಕ್ರಿಯೆಯನ್ನು ಕೂಡಲೆ ಮಾಡುವದಾದರೆ ವರ್ತಮಾನಕಾಲವೂ, ಮುಂದೆ ಮಾಡುವದಾದರೆ ಭವಿಷ್ಯತ್ಕಾಲವೂ ಬರುತ್ತವೆ. ಉದಾ:—

*Will* you light this lamp ? ಇಷ್ಟು (ಕೊಂಚ) ದೀಪಾ ಹಚ್ಚುತ್ತೀಯಾ?
*Will* you come to-morrow ? ನಾಳಿಗೆ ಬರುವಿಯಾ ?

೨೮ ಶಬ್ದಸಂಗ್ರಹ ೬.

| | | | |
|---|---|---|---|
| Fresh[2] | ತಾಜಾ, ನೂತನ. | Right | ೧ ಸಮ, ಸರಿ; ೨ ನ್ಯಾಯ; ೩ ಬಲಗಡೆಯ. |
| Stale | ತಂಗಳ. | Wrong | ೧ ಅಯೋಗ್ಯವಾದ; ೨ ತಪ್ಪಾದ, ೩ ಅನ್ಯಾಯ. |
| De'li'ci'ous' | ಅತ್ಯಂತ ರುಚಿಕರವಾದ. | A sea'son | (ಸೀಜನ) ಋತು, ಕಾಲ. |

1) Yes ಎಂಬದು ಕ್ರಿಯಾವಿಶೇಷಣವು. 2) Fresh water ಸೀ ನೀರು.

| | | | |
|---|---|---|---|
| Cold | ೧ ತಣ್ಣಗಾದ; ೨ ನೆಗಡಿ; ೩ ಚಳಿ, ಶೀತ. | The spring | ವಸಂತಕಾಲ |
| | | The sum'mer | ಬೇಸಿಗೆ. |
| Cold'ness | ಚಳಿ, ಶೈತ್ಯ, ತಂಪು. | The rain'y season | ಮಳೆಗಾಲ. |
| Warm | ಬೆಚ್ಚಗೆ, ಬಿಸಿ. | The win'ter | ಚಳಿಗಾಲ. |
| Luke'warm | ಉಗುರ (ಅರೆ) ಬೆಚ್ಚಗಾದ. | A year | ವರುಷ. |
| Warmth | ಕಾವು. | A plate / A dish | ಹರಿವಾಣ, ತಾಟು. |
| Heat | ಉಷ್ಣತೆ, ತಾಪ, ಸೆಕೆ. | | |
| A glass | ಸಣ್ಣ ಕಾಜಿನ ಪಾತ್ರೆ. | A dish | ತುಂಬಿದ ತಾಟು, ಪಕ್ವಾನ್ನ. |
| ಸುಖ, ಆನಂದ | plea'sure[1]. | ಮಾವಿನ ಹಣ್ಣು | a man'go. |
| ನೋವು, ದುಃಖ | pain. | ವಸ್ತು, ಪದಾರ್ಥ ಮಾತು | a thing. |
| ಹಿಕ್ಕು ಬಾಚು | to comb (ಕೋಮ್). | ಚಿವುಟು | to pinch. |
| ಬಯ್ಯು, ಅಪಶಬ್ದ ಉಪಯೋಗಿಸು. | to a-buse'. | ಸೋಲಿಸು | to de-feat. |

## ಭಾಷಾಂತರಪಾಠ ೬.

೫. 1. *Are* not our bodies warm? 2. *Has* your brother many books? 3. *Is* not the heat of summer great? 4. *Is it* a large cellar? 5. *Is* that your sister's thimble? 6. *Is* he a disobedient son? 7. *Will* you take this glass of milk? 8. *Do* you *take* tea? 9. *Do* you *know* that man? 10. *Does* he *like* milk? 11. *Will* you *light* the candle? 12. *Does* not your mother *like* coffee? 13. *Do* you *like* the dish? 14. *Is* it not a delicious dish? 15. *Are* you ill? 16. *Will* you *mend* this pen? 17. *Were* they not *writing*? 18. *Is* not spring one of[2]

---

1) ಶಬ್ದದ ಅಂತ್ಯದಲ್ಲಿ sure ಎಂಬದರ ಉಚ್ಚಾರವು ಬಹುತರವಾಗಿ « ಜರ್ » ಆಗಿರುತ್ತದೆ. 2) of ಎಂಬದಕ್ಕೆ ಒಮ್ಮೊಮ್ಮೆ ಅಲ್ಲಿ, ಒಳಗಿನ ಎಂಬ ಅರ್ಥವಾಗುತ್ತದೆ.

the four seasons of the year? 19. *Do* we not *drink* fresh water? 20. *Do* not children *like* sugar? 21. *Is* not sea water salt? 22. *Do* you *like* the cold of winter? 23. *Is* the water lukewarm? 24. *Have* you no sister? 25. The bodies of living animals are warm.

೧ ನೀನು ಮಾತಾಡುತ್ತಿದ್ದಿಲ್ಲವೋ? ೨ ಅವನನ್ನು ಕರೆಯುತ್ತೀಯಾ? ೩ ಆ ಲೆಕ್ಕಣಿಕೆಯನ್ನಷ್ಟು ತರುತ್ತೀಯಾ? ೪ ಅವನು ಬರಲಿಕ್ಕಿಲ್ಲವೋ? ೫ ನಿನಗೆ ಈ ಮಾವಿನ ಹಣ್ಣುಗಳು ಸೇರುವದಿಲ್ಲವೋ? ೬ ಆ ಹಾಲು ಆರಿಲ್ಲವೋ? ೭ ನನಗೆ ಬಹಳ ಸುಖವಾಗುತ್ತದೆ. ೮ ನಿನಗೆ ಮಜ್ಜಿಗೆ ಸೇರುವದಿಲ್ಲವೋ? ೯ ನಾನು ಓದುತ್ತಿದ್ದಿಲ್ಲವೋ? ೧೦ ನೀನು ಆಡುತ್ತಿದ್ದಿಲ್ಲವೋ? ೧೧ ಅವನ ಮುಂಡಾಸು ಹಸರು ಬಣ್ಣದ್ದಿದ್ದಿಲ್ಲವೋ? ೧೨ ಅವನು ನಿನ್ನ ಕೂಡ ಹಗೆತನ ಮಾಡುತ್ತಾನೋ? ೧೩ ನೀನು ಹೋಗುತ್ತಿದ್ದಿಲ್ಲವೋ? ೧೪ ಹೊಳೆಯು ಆಳವಾಗಿದೆಯೋ? ೧೫ ಮದರಾಸು ದೊಡ್ಡ ಪಟ್ಟಣವೋ? ೧೬ ಅವನ ಬಳಿಯಲ್ಲಿ ಚೀಲವಿಲ್ಲವೋ? ಆ ಕದಕ್ಕೆ ಹಿಡಿಕೆ ಇಲ್ಲವೋ? ೧೮ ನಿನ್ನ ಬಳಿಯಲ್ಲಿ ಗಡಿಯಾರವಿಲ್ಲವೋ? ೧೯ ನಿನ್ನ ಕೈಗಳು ತಣ್ಣಗಿವೆ. ೨೦ ನಿನಗೆ ತಾಜಾ ಹಾಲು ಸಿಗುತ್ತವೋ? ೨೧ ನಿನಗೆ ಈ ವಸ್ತು[1] ಬೇಕೋ? ೨೨ ನಿನಗೆ ಹೀಗೆ ತೋರುತ್ತದೋ? ೨೩ ಅವನಿಗೆ ಈ ಮಾತು ಗೊತ್ತಿದೆಯೋ? ೨೪ ನಿನಗೆ ಈ ಮಾತು ಸರಿ ಬರುತ್ತದೋ? ೨೫ ನನಗೆ ನೆನಪಿಲ್ಲ. ೨೬ ಆಕೆಯು ತನ್ನ ಕೂದಲು ಹಿಕ್ಕಿಕೊಳ್ಳುತ್ತಿದ್ದಾಳೆ. ೨೭ ಅವನು ಬರೆಯುತ್ತಿದ್ದಿಲ್ಲವೋ? ೨೮ ನನಗೆ ಇಂಥ ಮಾತು[2] ಸರಿ ಬರುವದಿಲ್ಲ. ೨೯ ಇಂಥ ಹುಳಿ ಹಣ್ಣು ನೀನು ತಿನ್ನುವಿಯಾ? ೩೦ ಈ ಮಾತು ಅನ್ಯಾಯವಾದದ್ದು.



1) ಒಮ್ಮೊಮ್ಮೆ ವಸ್ತು ಅಥವಾ ಮಾತು ಎಂಬ ಶಬ್ದವನ್ನು ಬಿಟ್ಟು ಬಿಟ್ಟು ಇಂಗ್ಲಿಷದಲ್ಲಿ ನಪುಂಸಕಲಿಂಗದ ಸರ್ವನಾಮವನ್ನು ಹಾಕಿದರೂ ಸಾಗುತ್ತದೆ. ಕನ್ನಡದಲ್ಲಿ ಸಹ ಈ ರೀತಿಯಾಗಿ ಎಷ್ಟೋ ಕಡೆಯಲ್ಲಿ ಕಂಡುಬರುತ್ತದೆ.

2) ಇಲ್ಲಿ ಮಾತು ಎಂಬ ಶಬ್ದದ ಅರ್ಥವು ಕೆಲಸ, ಸಂಗತಿ ಎಂತ ಮಾಡಿದರೆ matter, business. ಇಲ್ಲವೆ affair ಎಂಬ ಶಬ್ದವನ್ನು ಪ್ರಯೋಗಿಸಬೇಕು.

## ೭ ನೇ ಪಾಠ.

## ಪ್ರಶ್ನಾರ್ಥಕ ಸರ್ವನಾಮಗಳು.

## Interrogative Pronouns.

೩೦ ಇಂಗ್ಲಿಷದಲ್ಲಿ ಪ್ರಶ್ನಾರ್ಥಕ ಸರ್ವನಾಮಗಳು ಮೂರು—
Who[1] ಯಾರು; ದ್ವಿ. Whom ಯಾರನ್ನು; ಷ. Whose ಯಾರ.
Which[1] ಯಾವ.
What[1] ಏನು, ಯಾತರ, ಯಾವ, ಎಲ್ಲಿಯು.

೩೧ ಈ ಸರ್ವನಾಮಗಳು ಯಾವಾಗಲೂ ವಾಕ್ಯದ ಆರಂಭದಲ್ಲಿರುತ್ತವೆ

ಉದಾ—*What* are you doing? ನೀನು ಏನು ಮಾಡುತ್ತೀ?

ಈ ವಾಕ್ಯದಲ್ಲಿ what ಎಂಬದು are doing ಎಂಬ ಕ್ರಿಯಾಪದದ ಕರ್ಮಪದವು.

೩೨ Who ಎಂಬ ಶಬ್ದವನ್ನು ಇವರು ಯಾರು ಎಂದು ಕೇಳುವದಕ್ಕಾಗಲಿ, ಅವರನ್ನು ಕುರಿತು ಏನಾದರೂ ವರ್ತಮಾನ ತಿಳಿದುಕೊಳ್ಳುವದಕ್ಕಾಗಲಿ ಪ್ರಯೋಗಿಸುವರು. ಇದರ ಮುಂದೆ ನಾಮಪದವು ಬರುವದಿಲ್ಲ.

ಉದಾ—*Who* is this man? ಈ ಮನುಷ್ಯನು ಯಾರು?

೩೩ ನಿಯಮಿತ ಸಂಖ್ಯೆಯೊಳಗಿನ ಒಂದು ಅಥವಾ ಹೆಚ್ಚು ವ್ಯಕ್ತಿಗಳ ವಿಷಯವಾಗಿ ಮಾತಾಡುವದಾದರೆ, which ಎಂಬ ಶಬ್ದವನ್ನು ಪ್ರಯೋಗಿಸಬೇಕು. ಇದರ ಮುಂದೆ ಒಮ್ಮೊಮ್ಮೆ ನಾಮಪದವು ಬರುತ್ತದೆ, ಒಮ್ಮೊಮ್ಮೆ ಬರುವದಿಲ್ಲ

ಉದಾ—*Which* man is it? (ಈ ಮನುಷ್ಯರಲ್ಲಿ) ಯಾವನು?
*Which* is your house? (ಈ ಮನೆಗಳಲ್ಲಿ) ನಿಮ್ಮ ಮನೆ ಯಾವದು,

೩೪ What ಎಂಬ ಶಬ್ದದ ಮುಂದೆ ನಾಮಪದವು ಇರದಿದ್ದರೆ, ಅದು ನಪುಂಸಕಲಿಂಗ ಏಕವಚನದಲ್ಲಿರುತ್ತದೆ; ಮುಂದೆ ನಾಮಪದವು ಇದ್ದರೆ, ಅ

1) Who ಎಂಬ ಶಬ್ದದೊಳಗಿನ h ದ ಉಚ್ಚಾರ ಸ್ವಲ್ಪ ಸ್ಪಷ್ಟವಾಗುತ್ತದೆ; ಆದರೆ ಉಳಿದ ಎರಡು ಶಬ್ದಗಳೊಳಗಿನ h ದ ಉಚ್ಚಾರವಾಗುವದಿಲ್ಲ.

ನಾಮಪದದ ಲಿಂಗವಚನಗಳು ಅದಕ್ಕೆ ಹತ್ತುತ್ತವೆ; What ಎಂಬ ಶಬ್ದವನ್ನು ಯಾವನಾದರೊಬ್ಬನ ಉದ್ಯೋಗವನ್ನಾಗಲಿ, ಗುಣ ಸ್ವಭಾವ ಸ್ವರೂಪಗಳ ವಿಷಯವನ್ನಾಗಲಿ, ತಿಳಿದುಕೊಳ್ಳುವದಕ್ಕಾಗಿ ಉಪಯೋಗಿಸುತ್ತಾರೆ, ಉದಾ—

*What* is he? ಅವನ ಉದ್ಯೋಗವು ಯಾವದು?
*What* poem is this? ಇದು ಎಂಥ (ಅಥವಾ ಯಾವ) ಕಾವ್ಯವು?
*What* boys are these? ಈ ಹುಡುಗರು ಎಲ್ಲಿಯವರು? ಯಾವ ಹುಡುಗರಿರುವರು?

೩೫ *Which* man is this? ಮತ್ತು *What* man is this? ಎಂಬ ವಾಕ್ಯಗಳೊಳಗಿನ ಮೊದಲನೇ ವಾಕ್ಯದಲ್ಲಿ which ಎಂಬ ಶಬ್ದದಿಂದ ಕೇಳುವವನಿಗೆ ಗೊತ್ತಿದ್ದಂಥ ಕೆಲವು ಮನುಷ್ಯರೊಳಗೆ ಇವನೊಬ್ಬನಿದ್ದಾನೆ ಎಂಬ ಅರ್ಥವು ಹೊರಡುತ್ತದೆ. ಎರಡನೇ ವಾಕ್ಯದಲ್ಲಿ what ಎಂಬ ಶಬ್ದದಿಂದ ಆ ಮನುಷ್ಯನ ಗುರುತು ಕೇಳುವವನಿಗೆ ಇಲ್ಲೇ ಇಲ್ಲ. ಇವನಿಗೆ ಅವನ ವಿಷಯವಾಗಿ ಏನಾದರೂ ತಿಳಿದುಕೊಳ್ಳಬೇಕಾಗಿದೆ ಎಂಬ ಅರ್ಥವಾಗುತ್ತದೆ.

### ೩೬ ಶಬ್ದಸಂಗ್ರಹ ೭.

| | | | |
|---|---|---|---|
| Cle'rgy-man | ಧರ್ಮೋಪದೇಶಕ, ಪಾದ್ರಿ. | A priest | ಆಚಾರ್ಯ, ಅರ್ಚಕ, ಉಪಾಧ್ಯಾಯ. |
| A law'yer | ಕಾಯಿದೆ ಬಲ್ಲವ, ವಕೀಲ. | An en'gin'eer | ೧ ಯಂತ್ರ ನಡಿಸುವವ, ೨ ಮನೆ, ಕೆರೆ, ಕಾಲುವೆ, ಪೂಲು, ಮಾರ್ಗ ಮುಂತಾದವುಗಳನ್ನು ಕಟ್ಟಿಸುವ ವಿದ್ಯೆ ಬಲ್ಲವ, |
| A musi'cian | ವಾದ್ಯದವ, ಗಾಯಕ. | An o'ffi'cer | ಕಾಮಗಾರ, ಅಧಿಕಾರಸ್ಥ, ಉದ್ಯೋಗಸ್ಥ. |
| A clerk | ಕಾರಕೂನ. | A ca'ptain | ಕಪ್ತಾನ, ಹಡಗದ ಮುಖ್ಯಸ್ಥ. |
| A sculp'tor[1] | ಕಟಿಯುವವ. | A gro'cer | ಕಿರಾಣಿ ಅಂಗಡಿಕಾರ. |
| An en-gra'ver | ಕೆತ್ತುವವ, ಕಟಿಯುವವ. | A join'er[2] A carpenter | ಬಡಿಗ. |

1) Sculptor = ಕಟಿದು ಅಥವಾ ಕೆತ್ತಿ ಕಲ್ಲಿನ ಮೂರ್ತಿಗಳನ್ನಾಗಲಿ, ಪ್ರತಿಮೆಗಳನ್ನಾಗಲಿ ತಯಾರ ಮಾಡುವವನು. Engraver=ಕಲ್ಲು, ಲೋಹ ಮುಂತಾದ ಕಠಿಣ ಪದಾರ್ಥಗಳ ಮೇಲೆ ಅಕ್ಷರಗಳನ್ನಾಗಲಿ, ಆಕೃತಿಗಳನ್ನಾಗಲಿ, ನಕ್ಷೆಯನ್ನಾಗಲಿ ಕೊರೆಯುವವನು.

2) Carpenter ಬಡಿಗ. Joiner ಕಟ್ಟಿಗೆಯ ಸೋಫಾನ, ಕಿಡಕಿ, ಪೆಟ್ಟಿಗೆ, ಕಪಾಟು ಮುಂತಾದ ಸಾಮಾನುಗಳನ್ನು ಮಾಡುವವನು.

4 ii

| | | | |
|---|---|---|---|
| A cop-per-smith | ಕಂಚುಗಾರ, ತಾಂಬಟಿಗ. | A black'smith An i'ron-smith (ಅಯರ್ನ ಸ್ಮಿಥ್) | ಕಮ್ಮಾರ. |
| A wri'ter | ಬರೆಯುವವ, ಲೇಖಕ. | A sad'dler | ಜೀನಗಾರ. |
| A build'ing | ಮನೆ, ಇಮಾರತು, ಕಟ್ಟಡ. | A mil'ler | ಬೀಸುವವ. |
| A butch'er | ಕಟುಕರವ, ಕಸಾಯಿ. | | |
| A sta'tioner | ಕಾಗದ, ಮಸಿ, ಮುಂತಾದವುಗಳನ್ನು ಮಾರುವವ. | A glaz'ier (ಗ್ಲೇಝಿಯರ) | ಕನ್ನಡಿ ಹಚ್ಚುವವ. |
| A con-fec'tioner | ಮಿಠಾಯಿಗಾರ, ರೇವಡಿಗಾರ. | A lin'en-dra-per | ಸಾರುಬಟ್ಟೆ ಮಾರುವವ. |
| A frame | ಚೌಕಟ್ಟು. | A stone'cut-ter | ಕಲ್ಲುಕುಟ್ಟಿಗ. |
| Gloves | ಕೈಚೀಲಗಳು. | A hand-ker-chief[1] | ಕೈವಸ್ತ್ರ, ಯಲವಸ್ತ್ರ |
| A sail'or | ನಾವಿಕ, ಅಂಬಿಗ. | A per-fum'er | ಬುಕ್ಕಿಟ್ಟುಗಾರ. |
| A mill | ಬೀಸುವ ಕಲ್ಲು, ಯಂತ್ರ. | A farm'er | ಒಕ್ಕಲಿಗ, ರೈತ. |
| A wa'ter-mill | ನೀರಿನ ಬಲದಿಂದ ತಿರುಗುವ ಯಂತ್ರ. | A boot | ಹರಡಿನ ಮೇಲೆ ಇರುವ ಜೋಡು. |
| A wind'mill | ಗಾಳಿಯಿಂದ ತಿರುಗುವ ಯಂತ್ರ. | A shoe | ಜೋಡು, ಮೊಚ್ಚೆ. |
| An ar'chi-tect (ch=ಕ್) | ಶಿಲ್ಪಿ, ಶಿಲ್ಪಶಾಸ್ತ್ರ ಬಲ್ಲವ. | A la'bour-er | ಕೂಲಿಕಾರ, ಕೂಲಿಯವ |
| An arti-st[2] | ಉತ್ಕೃಷ್ಟ ಶಿಲ್ಪಿಗ, ಕಲಾವಂತ. | A smith | ಕಮ್ಮಾರ, ಲೋಹದ ಕೆಲಸ ಮಾಡುವವ. |
| An arti-san A work'man | ಕೈಗಾರಿಕೆ ಕೆಲಸ ಮಾಡುವವ, ಪಂಚಾಳ. | A gold'smith | ಅಕ್ಕಸಾಲಿಗ, ಪತ್ತಾರ |
| | | A name | ಹೆಸರು. |

1) ಈ ಶಬ್ದದೊಳಗಿನ d ವನ್ನು ಉಚ್ಚರಿಸಬಾರದು. ಇದೇ ಮೇರೆಗೆ, handsome Wed-nesday ಎಂಬ ಶಬ್ದದೊಳಗಿನ d ದ ಉಚ್ಚಾರವಾಗುವದಿಲ್ಲ.

2) ಚಿತ್ರಗಾರರು, ಕಟೆಯುವ ಕೆಲಸ ಮಾಡುವವರು, ಸಂಗೀತಗಾರರು ಮುಂತಾದವರಿಗೆ artists ಅನ್ನುತ್ತಾರೆ. ಬಡಿಗತನ, ಕಮ್ಮಾರಿಕೆ. ಅಗಸಾಲಿಕೆ ಮುಂತಾದ ಸಾಧಾರಣ ಕೈ ಕೆಲಸ ಮಾಡುವವರಿಗೆ artisans ಅನ್ನುತ್ತಾರೆ; ಯಾವದಾದರೂ ಕೈಗಾರಿಕೆಯ ಸಾದಾ ಕೆಲಸ ಮಾಡುವವರಿಗೆ workmen ಅನ್ನುತ್ತಾರೆ. ಈ ಶಬ್ದವನ್ನು ಕೂಲಿಕಾರರಿಗೆ ಸಹ ಹಚ್ಚುವರು

| | | | |
|---|---|---|---|
| ವೈದ್ಯ | a doctor<br>a phy-si'cian. | ಅಂಗಡಿಕಾರ | a shop-keeper. |
| ಗಿರಾಕಿ | a cu'stom-er. | ಉಪ್ಪಾರ | a brick'layer,<br>a mason. |
| ಮೋಚಿ, ಚಮಗಾರ, (ಚರ್ಮಕಾರ) | a shoe-maker. | ಬೆಸ್ತರವ, ಜಾಲಗಾರ, ಮೀನುಗಾರ. | a fish'er-man. |

## ಭಾಷಾಂತರಪಾಠ ೭.

೩೭. 1. *Who* am I ? 2. *What* is my name ? 3. *Who* are you ? 4. *Who* is he ? 5. *Who* are these women ? 6 *Who* is it ? 7. *Which* woman is it ? 8. *What* book is this ? 9. *What* have you ? 10. *What* do you say ? 11. *What* was he doing ? 12. *What* does a linen-draper sell ? 13. He sells linen, gloves, handkerchiefs etc[1]. 14. *What* does the joiner make ? 15. He makes doors, window-frames, cupboards etc. 16. Our miller has two mills, a watermill and a wind-mill. 17. *Will* your servant go to the grocer's shop ? 18. I want some coffee, tea and sugar. 19. *What* does the carpenter make ? 20. He builds houses, bridges, ships etc. 21 *That* young painter is good artist. 22 *What* does a butcher sell ? 23 *What* meat have we ? 24 *Who* is that officer ? 25 Is he the captain of the ship ? 26 *What* ship is that ? 27 *Which* of the cows gives no milk ? 28 *Which* of these buildings do you like ? 29 *Which* of these boys was abusing you ? 30 *Who* makes boots and shoes ? 31 *What* do horses and cows eat ? 32 *What* do tailors make ? 33 *What* are those men, women and children doing ? 34 *Which* boy was reading that bad book ? 35 A stationer sells paper, ink, inkstands, pencils etc ?

೧ ನೀನು ಯಾರ ಮಗನು? ೨ ನಿನ್ನ ಎಡಗೈ ಯಾವದು, ಬಲಗೈ ಯಾವದು? ೩ ಮೊಚ್ಚಿಗಾರನು ಜೋಡು (ತಯಾರು) ಮಾಡುತ್ತಾನೆ. ೪ ನಮ್ಮ ಗವಳಿಗನು ತಾಜಾ ಹಾಲು ತರುತ್ತಾನೆ. ೫ ನಿಮ್ಮ ತೋಟಿಗನ ಹತ್ತರ ಚಂದವಾದ

1) ಇದು ಲ್ಯಾಟಿನ್ ಭಾಷೆಯೊಳಗಿನ ಎಟ್ ಸಿಟರಾ ಎಂಬದರ ( et cetera ) ಸಂಕ್ಷೇಪವು. ಇದಕ್ಕೆ and other/things 'ಮುಂತಾದವುಗಳು' ಎಂಬ ಅರ್ಥವು. /

ಹೂಗಳುಂಟು. ೭ ಈ ಗಿಡ್ಡಂಗಿಯ ಬಣ್ಣ ನಿನ್ನ ಮನಸಿಗೆ ಬರುತ್ತದೋ? ೭ ಅವನು ಒಳ್ಳೇ ವೈದ್ಯನಿದ್ದಾನೋ? ೮ ತೋಟದ ಬಾಗಿಲವನ್ನು ಯಾರು ತೆಗೆದಿರುವರು[1]? ೯ ಈ ಹೂಗಳಲ್ಲಿ ಯಾವದು ನಿನ್ನ ಮನಸಿಗೆ ಬರುತ್ತದೆ? ೧೦ ಆ ಹುಡುಗರಲ್ಲಿ ಯಾರ್‍ಯಾರು ಈಸುತ್ತಿದ್ದರು? ೧೧ ಆ ಅಂಗಡಿಕಾರನಿಗೆ ಗಿರಾಕಿಗಳು ಬಹಳ. ೧೨ ಈ ಜೋಡುಗಳಲ್ಲಿ ನಿನ್ನದು ಯಾವದು? ೧೩ ನಿಮ್ಮ ಪ್ರೀತಿ ಯಾವ ಪಕ್ಷಿಗಳ ಮೇಲೆ? ೧೪ ಯಾವ ಗಿಡಗಳಿಗೆ ದೊಡ್ಡ ದೊಡ್ಡ ಎಲೆಗಳಾಗುತ್ತವೆ? ೧೫ ಆ ಕೆರೆಯ ಹೆಸರೇನು? ೧೬ ನಿಮ್ಮ ಅಣ್ಣನ ಸ್ನೇಹಿತನ ಹೆಸರೇನು? ೧೭ ಉಪ್ಪಾರರು ಏನು ಮಾಡುತ್ತಿದ್ದರು? ೧೮ ಈ ಮನೆಯ ಎತ್ತರವೆಷ್ಟು? ೧೯ ಈ ಕೈಚೀಲಗಳು ಯಾರವು? ೨೦ ಅವನು ಏನು ಕೇಳುತ್ತಾನೆ? ೨೧ ಇದು ಎಂಥ ಕಟ್ಟಿಗೆ? ೨೨ ನನ್ನ ಪುಸ್ತಕಗಳಲ್ಲಿ ಯಾವದು ನಿನ್ನ ಮನಸಿಗೆ ಬರುತ್ತದೆ? ೨೩ ಕಟಕರವನು ಮಾಂಸವನ್ನು ಮಾರುತ್ತಾನೆ. ೨೪ ಜಾಲಗಾರನು ಮೀನಗಳನ್ನು ಹಿಡಿದು ಮಾರುತ್ತಾನೆ. ೨೫ ನಿಮ್ಮ ಮಕ್ಕಳಿಗೆ ಯಾರು ಕಲಿಸುತ್ತಾರೆ?

---

## ೮ ನೇ ಪಾಠ.

### ಪ್ರಶ್ನಾರ್ಥಕ ಕ್ರಿಯಾವಿಶೇಷಣಗಳು.

### Interrogative Adverbs

೩೮ ಪ್ರಶ್ನಾರ್ಥಕ ಕ್ರಿಯಾವಿಶೇಷಣಗಳು ಮುಖ್ಯವಾಗಿ ಐದು. 'ಅವು ಯಾವವೆಂದರೆ—when[2] ಯಾವಾಗ, ಎಂದು; how ಹೇಗೆ; where[2] ಎಲ್ಲಿ, ಎತ್ತ; Why ಅಥವಾ wherefore ಯಾಕೆ, ಏನು ಕಾರಣ; whence[2] ಎಲ್ಲಿಂದ.

೩೯ ಪ್ರಶ್ನಾರ್ಥಕ ಸರ್ವನಾಮಗಳಂತೆ ಈ ಶಬ್ದಗಳು ಯಾವಾಗಲೂ ವಾಕ್ಯದ ಆರಂಭದಲ್ಲಿರುತ್ತವೆ. ಉದಾ—

*When* will he come? ಅವನು ಯಾವಾಗ ಬರುವನು?
*Whence* did she bring it? ಆಕೆಯು ಅವನ್ನು ಎಲ್ಲಿಂದ ತಂದಳು?

ಈ ಶಬ್ದಗಳನ್ನು ಪ್ರಯೋಗಿಸುವಾಗ ೨೩ ನೇ, ೨೪ ನೇ, ೨೫ ನೇ ಕಲಮುಗಳೊಳಗಿನ ನಿಯಮಗಳನ್ನು ಅನುಸರಿಸಬೇಕು.

---

1) ತೆಗೆ = to open.
2) ಈ ಶಬ್ದಗಳೊಳಗಿನ h ವನ್ನು ಉಚ್ಚರಿಸುವದಿಲ್ಲ.

## ೪೦ ಶಬ್ದಸಂಗ್ರಹ ೮.

| | | | |
|---|---|---|---|
| To rise | ಮೂಡು, ಏಳು. | A boat | ದೋಣಿ, ನಾವೆ, ಹೋಡಿ. |
| To set | ಮುಳುಗು. / ಸ್ಥಾಪಿಸು, ಇಡು, | A bas'ket | ಬುಟ್ಟಿ, ಪುಟ್ಟಿ. |
| A ward-robe | ಬಟ್ಟೆಬರೆಗಳನ್ನು ಇಡುವ ಕಪಾಟು. | A meal | ಊಟ. |
| | | Sup'per | ರಾತ್ರಿ ಊಟ. |
| Tif'fin, lunch'eon[1] | ಫಲಾಹಾರ, ತಿಂಡಿ, ಉಪಾಹಾರ. | To sup | ರಾತ್ರಿ ಊಟ ಮಾಡು. |
| ಅನ್ನು | to say. | ತಯಾರಾದ, ಸಿದ್ಧವಾದ | rea'dy. |
| ಎಷ್ಟು | how ma'ny[2] / how much. | ಮಧ್ಯಾಹ್ನದ ಊಟ | din'ner. |
| ಮುಂಜಾನೆಯ ಊಟ | break'fast. | | |
| ಮುಂಜಾನೆಯ ಊಟ ಮಾಡು | to break'fast. | ಮಧ್ಯಾಹ್ನದ ಊಟ ಮಾಡು | to dine. |

## ಭಾಷಾಂತರಪಾಠ ೮

೪೧ 1 *When* does the sun rise? 2 *When* does it[3] set? 3 *Where* are you going? 4 *Where* does your brother live? 5 *When* do you take your meals? 6 *Whose* stick is this? 7 *Why* do you learn your lesson? 8 *Where* is your ward-robe? 9 *How* are you? 10 *How* do you know that? 11 *When* does your barber come? 12 *When* will you do it? 13 *Whence* do they come? 14 *Wherefore* do you rejoice? 15 *Why* do you run? 16 *Why* do you say so? 17 *Where* shall we play? 18 *How* is that? 19 *Are* you hungry? 20 *Where* is he? 21 *Where* do you live? 22 *You* are right[4]. 23 *Where* do you keep your clothes? 24 *Where* shall I place this basket?

---

1) Tiffin ಎಂಬ ಶಬ್ದವನ್ನು ಮಧ್ಯಾಹ್ನದಲ್ಲಿ ಮಾಡುವ ಫಲಾಹಾರಕ್ಕೆ ಮಾತ್ರ ಹಚ್ಚುತ್ತಾರೆ. ಆದರೆ Luncheon ಎಂಬದನ್ನು ಬೇಕಾದಾಗ ಮಾಡುವ ಉಪಹಾರಕ್ಕೆ ಹಚ್ಚಬಹುದು.

2) How many ಎಂಬದು ಸಂಖ್ಯೆಯನ್ನು, how much ಎಂಬದು ಪರಿಮಾಣವನ್ನು ತೋರಿಸುತ್ತವೆ.

3) ಕನ್ನಡದಂತೆ ಇಂಗ್ಲಿಷದಲ್ಲಿ Sun ಸೂರ್ಯ ಎಂಬ ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸುವದು ಬಹಳ; ಆದರೆ ಒಮ್ಮೊಮ್ಮೆ ಅದನ್ನು ನಪುಂಸಕಲಿಂಗದಲ್ಲಿ ಪ್ರಯೋಗಿಸುವದು.

4) ನೀವು ಹೇಳಿದುದು ಅಥವಾ ಮಾಡಿದುದು ಸರಿಯಾಗಿದೆ.

೧ ನೀನು ನಿನ್ನ ರೊಕ್ಕಾ (ಹಣ) ಎಲ್ಲಿ ಇಡುತ್ತೀ? ೨ ನೀನು ಎಲ್ಲಿ ಇದ್ದಿ? ೩ ನಿಮಗೆ ಎಷ್ಟು ಮಂದಿ ಮಕ್ಕಳು? ೪ ಅವನು ತನ್ನ ಮನೆಯನ್ನು ಯಾಕೆ ಮಾರುತ್ತಾನೆ? ೫ ನೀನು ಸಿದ್ಧಸಾಗಿರುವೆಯಾ? ೬ ಇದು ಸರಿಯಾಗಿದೆಯೋ? ೭ ನೀವು ಮುಂಜಾನೆ ಯಾವಾಗ ಊಟ ಮಾಡುತ್ತೀರಿ? ೮ ನಿನ್ನ (ಮಧ್ಯಾಹ್ನದ) ಊಟ ಸಿದ್ಧವಾಗಿಲ್ಲ? ೯ ನೀವು ಯಾಕೆ ಬರುವದಿಲ್ಲ? ೧೦ ನಿಮ್ಮಲ್ಲಿ ಎಷ್ಟು ಚಿಗರಿಗಳುಂಟು? ೧೧ ನಿನಗೆ ಎಷ್ಟು ಗಿರಾಕಿಗಳು ಬರುತ್ತವೆ? ೧೨ ನಿನ್ನ ಹತ್ತರ ಎಷ್ಟು ಎಣ್ಣಿ ಅದೆ. ೧೩ ನೀನು ಬರುವದಿಲ್ಲವೋ? ೧೪ ನೀನು ಯಾಕೆ ಮಾತಾಡುವದಿಲ್ಲ? ೧೫ ಆತನು ನಿನ್ನ ತಂದೆಯೋ? ೧೬ ನೀನು ದೀಪಗಳನ್ನು ಯಾಕೆ ಹಚ್ಚುವದಿಲ್ಲ? ೧೭ ನಮ್ಮ ಗವಳಿಗನಲ್ಲಿ ಎಷ್ಟು ಎಮ್ಮೆಗಳುಂಟು? ೧೮ ಅವನು ಏನು ಅನ್ನುತ್ತಾನೆ? ೧೯ ಅವರು ಯಾವಾಗ ಸಿದ್ಧರಾಗುವರು? ೨೦ ನನ್ನ ಮುಗನ ಬಟ್ಟೆಗಳು ಸ್ವಚ್ಛವಿಲ್ಲವೋ? ೨೧ ಈ ಮಾತು ನಿನ್ನ ಮನಸ್ಸಿಗೆ ಹೇಗೆ ಬರುತ್ತದೆ? ೨೨ ನಿನ್ನ ತಾಯಿ ತಂದೆಗಳು ಎಲ್ಲಿ ಇರುತ್ತಾರೆ? ೨೩ ನನ್ನ ಅಂಗಿ ಎಲ್ಲಿ ಅದೆ? ೨೪ ಆ ವಕೀಲನ ಮನೆ ಎಲ್ಲಿ ಅದೆ? ೨೫ ಆ ಹಡಗವು ಎಲ್ಲಿಂದ ಬರುತ್ತಾ ಇದೆ?

---

## ೯ ನೇ ಪಾಠ.

### ಚತುರ್ಥೀ ವಿಭಕ್ತಿ

### DATIVE CASE

೪೨ ನಾಮಪದದ ಹಿಂದೆ to ಅಥವಾ for ಎಂಬ ಅವ್ಯಯವು ಬಂದರೆ, ಆ ನಾಮಪದಕ್ಕೆ ಬಹುಶಃ ಚತುರ್ಥೀ ವಿಭಕ್ತಿ ಬರುತ್ತದೆ. ಉದಾ—

I will show this book *to Rama* ಈ ಪುಸ್ತಕವನ್ನು ರಾಮನಿಗೆ ತೋರಿಸುವೆನು.

I am doing this *for Rama* ನಾನು ಇದನ್ನು ರಾಮನಿಗೋಸ್ಕರ ಮಾಡುತ್ತಿದ್ದೇನೆ.

೪೩ Like, unlike, near ಎಂಬ ವಿಶೇಷಣಗಳ ಮುಂದೆ ಚತುರ್ಥೀ ವಿಭಕ್ತಿ ಬರುತ್ತದೆ; ಮತ್ತು ಆ ಚತುರ್ಥೀದರ್ಶಕ to ಬಹುತರ ಗುಪ್ತ ಇರುತ್ತದೆ.

೪೪ ಸರ್ವನಾಮದ ದ್ವಿತೀಯಾ ವಿಭಕ್ತಿಯ ರೂಪದ ಹಿಂದೆ to ಅಥವಾ for ಬಂದರೆ, ಚತುರ್ಥಿಯಾಗುತ್ತದೆ. ಉದಾ—

He will give the money *to* me ಅವನು ಆ ಹಣವನ್ನು ನನಗೆ ಕೊಡುವನು.

೪೫ ಕೆಳಗೆ ಬರೆದ ಕ್ರಿಯಾಪದಗಳ ಮುಂದೆ to ಎಂಬ ಅವ್ಯಯವನ್ನು ಸಾಧಾರಣವಾಗಿ ಬಿಟ್ಟುಬಿಡಬಹುದು. ವಿಶೇಷವಾಗಿ I, thou, he, she, it ಎಂಬ ಸರ್ವನಾಮಗಳ ಚತುರ್ಥೀ ರೂಪಗಳ ಹಿಂದೆ to ಎಂಬದನ್ನು ಲೋಪ ಮಾಡುವ ರೂಢಿಯು ಬಹಳ ಉಂಟು. To ಲೋಪ ಮಾಡುವದಾದರೆ, ಹಾಗು ಕರ್ಮವು ನಾಮಪದವಿದ್ದರೆ, ಚತುರ್ಥ್ಯಂತ ಶಬ್ದವನ್ನು ಕರ್ಮದ ಹಿಂದೆ ಇಡಬೇಕು.

ಉದಾ—He was showing the house *to me*

ಅಥವಾ He was showing *me* the house ಅವನು ನನಗೆ ಆ ಮನೆಯನ್ನು ತೋರಿಸುತ್ತಿದ್ದನು.

ಆದರೆ ಕರ್ಮಪದವು ಸರ್ವನಾಮವಿದ್ದರೆ, ಚತುರ್ಥ್ಯಂತ ಶಬ್ದವನ್ನು ಅದರ ಮುಂದೆ ಇಡಬೇಕಾಗುತ್ತದೆ; ಇಂಥಲ್ಲಿ ಚತುರ್ಥಿಯ ಹಿಂದೆ to ಬೇಕು.

ಉದಾ—He was showing it *to me* ಅವನು ಅದನ್ನು ನನಗೆ ತೋರಿಸುತ್ತಿದ್ದನು.

## ೪೬. ಶಬ್ದಸಂಗ್ರಹ ೯.

| | | | |
|---|---|---|---|
| To tell | ಹೇಳು, ವಿಧಿಸು, | To al-lo'w | (ಅಪ್ಪಣೆ) ಕೊಡು, ಸಮ್ಮತಿಸು. |
| To send | ಕಳುಹು. | To bring | ತಾ, ತರು. |
| To lend | ಕಡಾ ಕೊಡು, ಕೈಗಡ ಕೊಡು, | To fetch | ೧ (ಹೋಗಿ) ತಾ; ೨ ಬೆಲೆ ಬಳು (ತರು). |
| To fine | ದಂಡಾ ಕಟ್ಟು. | To pro'mise | ಮಾತು ಕೊಡು, ವಚನ ಕೊಡು. |
| To ask | ಕೇಳು. | To cost | ಬೆಲೆ ಬೀಳು, ಕ್ರಯ ಬೀಳು. |
| To show | ತೋರಿಸು. | To reach | ೧ (ಕೈಚಾಚಿ) ಕೊಡು; ೨ ಮುಟ್ಟು. |
| To pay | (ಸಂಬಳ) ಕೊಡು. | To hand | (ಕೈ ಎತ್ತಿ) ಕೊಡು. |
| To give | ಕೊಡು. | To grant | (ಬಿನ್ನಹ ಮಾಡಿಕೊಂಡರೆ) ಕೊಡು. |

| | | | |
|---|---|---|---|
| To of'fer | ತಕ್ಕೊ ಅನ್ನು, ಕೊಡಲಿಕ್ಕೆ ಹೋಗು,—ಬರು. | To forgive[1] / To par'don | ಕ್ಷಮಿಸು. |
| To refuse[2] | ಒಲ್ಲೆನ್ನು, ಇಲ್ಲೆನ್ನು, ಬೇಡನ್ನು, ನಿರಾಕರಿಸು. | To owe | (ಓ) ಋಣಿಯಾಗಿರು. |
| To de-ny | ಅಲ್ಲೆನ್ನು, ಅಲ್ಲಗಳೆ. | To envy | ಉರಿ, ಅಸೂಯೆ ಪಡು, ಹೊಟ್ಟೆಕಿಚ್ಚು ಮಾಡು. |
| To grudge | ಅಸಂತೋಷದಿಂದ ಕೊಡು. | To make | ಮಾಡು. |
| Freedom[3] / Li'ber-ty | ಸ್ವತಂತ್ರತೆ, ಬಿಡುಗಡೆ. | An o'range | ಕಿತ್ತಳೇಹಣ್ಣು. |
| | | Sin | ಪಾಪ. |
| A pray'er | ಪ್ರಾರ್ಥನೆ. | Me'rit | ಪುಣ್ಯ. |
| A fa'vour | ಉಪಕಾರ. | A re-quest | ಬಿನ್ನಹ. |
| An in'ju-ry | ೧ ಅನ್ಯಾಯ, ಅಪಕಾರ; ೨ ಅಪಾಯ, ಕೇಡು. | Leave | ರಜಾ, ಅಪ್ಪಣೆ. |
| Dut'y | ಕರ್ತವ್ಯ. | A'ny | ಯಾರಾದರೂ, ಏನಾದರೂ. |
| A visit | ಭೆಟ್ಟಿ, ಕಾಣು. | An of-fence | ಅಪರಾಧ. |
| To'tal | ಒಟ್ಟು. | A slave | ಗುಲಾಮ, ದಾಸ. |
| A ha'rbour | ರೇವು, ಬಂದರ. | All | ಎಲ್ಲ. |
| Wa'ges[4] | ಕೂಲಿ, ಸಂಬಳ. | ಬಟ್ಟಲು | a cup. |

1) To forgive ಎಂಬ ಶಬ್ದವನ್ನು ದೊಡ್ಡ ತಪ್ಪುಗಳ ಬಗ್ಗೆ ದಯವಿಟ್ಟು ಕ್ಷಮಿಸಬೇಕೆಂದು ಪ್ರಾರ್ಥಿಸುವಾಗ ಉಪಯೋಗಿಸುತ್ತಾರೆ. To pardon ಎಂಬದನ್ನು ಕ್ಷುಲ್ಲಕ ಸಂಗತಿಗಳ ಸಂಬಂಧದಿಂದ ಕ್ಷಮೆ ಬೇಡುವದಾದರೆ ಪ್ರಯೋಗಿಸುವರು. 2) To refuse ಎಂಬ ಕ್ರಿಯಾಪದವನ್ನು "ಯಾರಾದರೂ ಏನಾದರೂ ಬೇಡಿದರೆ ಅದನ್ನು ಕೊಡುವದಿಲ್ಲ" ಎಂಬ ಅರ್ಥದಿಂದ ಪ್ರಯೋಗಿಸುತ್ತಾರೆ. To deny ಎಂಬದನ್ನು "ಹೀಗೆ ಹೇಳಲಿಲ್ಲ, ಈ ಮಾತು ಅಲ್ಲ" ಎಂಬ ಅರ್ಥದಿಂದ ಪ್ರಯೋಗಿಸುವರು. 3) Freedom ಎಂಬ ಶಬ್ದವು "ಯಾರೊಬ್ಬರ ಆತಂಕವಿಲ್ಲದೆ ಬರೀ ನಮ್ಮ ಸ್ವಾಭಾವಿಕವಾದ ಅಧಿಕಾರಗಳನ್ನು ನಡಿಸೋಣ" ಎಂಬ ಅರ್ಥವನ್ನು ಸೂಚಿಸುತ್ತದೆ; ಆದರೆ liberty ಎಂಬದರಿಂದ "ಮೊದಲು ಅಂಕಿತದೊಳಗಿದ್ದದ್ದು ಬಿಡುಗಡೆ ಹೊಂದಿತೆಂಬ" ಗರ್ಭಿತಾರ್ಥವು ಹೊರಡುತ್ತದೆ. 4) ಈ ಶಬ್ದವು ಬಹುವಚನದಲ್ಲಿದ್ದು ಏಕವಚನದಂತೆ ಇದರ ಪ್ರಯೋಗವಾಗುತ್ತದೆ. ಕೂಲಿ-ಕುಂಬಳಿ ಮುಂತಾದ ಕೀಳ ತರದ ಕೆಲಸಗಳನ್ನು ಮಾಡುವ ಬಗ್ಗೆ ದೊರೆಯುವ ಸಂಬಳಕ್ಕೆ ಈ ಶಬ್ದವನ್ನು ಹಚ್ಚುತ್ತಾರೆ. ಸರಕಾರೀ ಉದ್ಯೋಗಸ್ಥರ ಸಂಬಳಕ್ಕೆ pay ಅಥವಾ salary ಅನ್ನುತ್ತಾರೆ. ಮತ್ತು ವೈದ್ಯರು, ವಕೀಲರು ಮುಂತಾದವರಿಗೆ ಕೊಡಬೇಕಾಗುವ ಹಣಕ್ಕೆ fee ಅನ್ನುತ್ತಾರೆ. ಇದೇ ಮೇರೆಗೆ ಶಾಲೆಗಳಲ್ಲಿ ಹುಡುಗರು ಕಲಿಯುವ ಬಗ್ಗೆ ಕೊಡಬೇಕಾಗುವ ಹಣಕ್ಕೆ ಸಹ fee ಅನ್ನುವರು.

| | | | |
|---|---|---|---|
| ಅರ್ಜಿ | a pe-ti'tion. | ಪ್ರಶ್ನೆ | a question. |
| ಅಪರಾಧಿ, ತಪ್ಪಿತಸ್ಥ, ಗುನ್ಹೆಗಾರ | an of-fen'der. | ಉತ್ತರ | an ans'wer. |

## ಭಾಷಾಂತರಪಾಠ ೯.

೪೭. 1 The ship will reach the harbour. 2 Will *you* reach me that orange? 3 I pardon *thee*[2], this offence. 4 Will you not pardon me? 5 Who will pardon my sins? 6 Who will tell *us* our duty? 7 God will forgive *us* our sins. 8 God will forgive you. 9 They do not forgive an injury 10 Thou wilt grant *me* life and favour. 11 I shall grant *him* his request. 12 He grants it to *me* 13 Your master will grant you leave. 14 Why do you grudge *them* their wages? 15 What will thy[2] wages be? 16 The wages of sin is death. 17 The master will allow the slave his liberty. 18 We will allow *him* a small sum of money. 19 Will you not promise your *friend* a visit? 20 He will not deny *you* anything. 21 He refuses *us* bread. 22. Do yon envy *me* my riches? 23 Will you fetch *me* my umbrella? 24 What will this table fetch? 25 The judge will fine *her* five rupees. 26 Your father will not refuse *you* the small sum of four rupees. 27 Shall I ask *you* a question? 28 *To which* of those boys shall I give these oranges? 29 *To whom* will you tell this news? 30 What will this cradle cost? 31 He has always freedom.

---

1) ಈ ಶಬ್ದದೊಳಗಿನ w ದ ಉಚ್ಚಾರವಾಗುವದಿಲ್ಲ.

2) ಕ್ರಿಸ್ತೀ ಜನರ ಬೈಬಲ್ ಎಂಬ ಧರ್ಮ ಪುಸ್ತಕದೊಳಗೆ thou, thee, thy ಎಂಬ ರೂಪಗಳು ಬಹಳವಾಗಿ ಪ್ರಯೋಗಿಸಿಯವೆ. ಇದಲ್ಲದೆ you ಎಂಬುದಕ್ಕೆ ಬದಲಾಗಿ ಅಲ್ಲಲ್ಲಿ ye ಎಂಬದನ್ನು ಪ್ರಯೋಗಿಸಿಯದೆ.

೧ ನಾನು ನನ್ನ ಅರ್ಜಿಯನ್ನು ನಿಮಗೆ ತೋರಿಸುವೆನು. ೨ ತಾವು ಆ ಪುಸ್ತಕವನ್ನು ನನಗೆ ಕೊಡುವಿರಾ? ೩ ಆ ಪುಸ್ತಕವನ್ನಷ್ಟು ನಮಗೆ ತಂದು ಕೊಡುವಿಯಾ? ೪ ಈ ಸೂಜಿಗಳನ್ನು ಅಕೆಗೆ ಕೊಡುವಿಯಾ? ೫ ನೀನು ನಿನ್ನ ಚಾಕು ನನಗೆ ಒಂದು ಕ್ಷಣಹೊತ್ತು[1] ಕೊಡುತ್ತೀಯಾ? ೬ ಒಂದು ಕುರ್ಚಿಗೆ ಎಷ್ಟು ಬೆಲೆ ಬೀಳುತ್ತದೆ? ೭ ನಾಲ್ಕು ಕುರ್ಚಿಗಳಿಗೆ ನಾನು ಎಷ್ಟು ಕ್ರಯ ಕೊಡಬೇಕಾಗುವದು? ೮ ಈ ಕುದುರೆಗೆ ಎಷ್ಟು ಬೆಲೆ ಬಂದೀತು? ೯ ನಾನು ಆತನಿಗೆ ಹತ್ತು ಕಿತ್ತಳೇ ಹಣ್ಣುಗಳನ್ನು ಕಳುಹುವೆನು. ೧೦ ನಾನು ಸೇವಕರಿಗೆ ಸಂಬಳ ಕೊಡುವೆನು. ೧೧ ನಾನು ಅವನಿಗೆ ಉತ್ತರ ಕೊಡುವೆನು. ೧೨ ಅವನು ನಿನಗೆ ಏನು ಉತ್ತರ ಕೊಡುತ್ತಾನೆ? ೧೩ ನಾನು ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದೆನು. ೧೪ ಅವನು ನಿನಗೆ ಐದು ರೂಪಾಯಿ[2] (ಸಂಬಳ) ಕೊಡುವನು. ೧೫ ನಾನು ನಿನಗೇನಾದರೂ ಕೊಡಬೇಕಾಗಿದೆಯೋ[3]? ೧೬ ನೀನು ನನಗೆ ಏಳು ರೂಪಾಯಿ ಕೊಡತಕ್ಕದ್ದು[4]. ೧೭ ನಾನು ಈ ಪತ್ರವನ್ನು ಯಾರಿಗೆ ಕೊಡಲಿ? ೧೮ ನಾನು ಯಾರ ಉಪಕಾರ ನೆನಿಸಲಿ? ೧೯ ಪತ್ರವು ಅವನಿಗೆ ಯಾವಾಗ ಮುಟ್ಟುವದು? ೨೦ ನೀನು ಪುಣೆಗೆ[5] ಯಾವಾಗ ಮುಟ್ಟುವಿ? ೨೧ ಈ ಹಡಗವು ಆ ದೇಶಕ್ಕೆ ಯಾವಾಗ ಮುಟ್ಟುವದು? ೨೨ ಆ ಲೆಕ್ಕಣಿಕೆಯನ್ನು ನನಗೆ (ಕೈಚಾಚಿ) ಕೊಡುತ್ತೀಯಾ? ೨೩ ಅವನು ನನ್ನನ್ನು ಕ್ಷಮಿಸಲಿಕ್ಕಿಲ್ಲ. ೨೪ ನಾನು ಆ ಅಪರಾಧಿಯನ್ನು ಕ್ಷಮಿಸಲಿಕ್ಕಿಲ್ಲ. ೨೫ ನನಗೆ ಸ್ವಲ್ಪ ಹಣ ಕಡಾ ಕೊಡುತ್ತೀರಾ? ೨೬ ಅವನು ನಿನಗೆ ಐದು ರೂಪಾಯಿ ಕೊಡಲಿಕ್ಕೆ[6] ಬರುವನು. ೩೦ ಅವನು ನನಗೆ ಒಂದು ಬಟ್ಟಲು ಹಾಲು ಕೊಡುತ್ತಾನೆ. ೩೧ ಈ ಟೊಪ್ಪಿಗೆಗೆ ನೀನು ಏನು ಕೊಟೆ?

## ೧೦ ನೇ ಪಾಠ.

### ಸ್ವತಃ Self

೬೮. I, thou, he, she, it ಎಂಬ ಸರ್ವನಾಮಗಳ ಕೆಲವು ವಿಭಕ್ತಿ ರೂಪಗಳಿಗೆ Self ಎಂಬ ಶಬ್ದವನ್ನು ಹಚ್ಚಿದರೆ, ಅವುಗಳ ಅರ್ಥವು ಸ್ವತಃ ಎಂತಾಗುತ್ತದೆ.

1) For a moment. 2) ರೂಪಾಯಿ = a Rupee. 3) Do I owe you anything? 4) You owe me seven rupees. 5) ಪುಣೆ = Poona. 6) To offer.

ಉದಾ:—

| ಏಕವಚನ. | | ಬಹುವಚನ. | |
|---|---|---|---|
| I myself | ನಾನೇ. | We ourselves | ನಾವೇ. |
| Thou thyself / You yourself | ನೀನೇ. | You yourselves | ನೀವೇ. |
| He himself | ಅವನು ತಾನೇ. | They themselves | ಅವರು ತಾವೇ, ಅವು ತಾವೇ. |
| She herself | ಅವಳು ತಾನೇ. | | |
| It itself | ಅದು ತಾನೇ. | | |

ಉದಾ:—He *himself* will write ಅವನು ತಾನೇ ಬರೆಯುವನು.

೪೯ ಈ ಶಬ್ದಗಳನ್ನು ಕರ್ತೃಪದದಿಂದ ಬೇರೆ ಮಾಡಿ ವಾಕ್ಯದ ಕೊನೆಗೆ ಹಾಕುವ ರೂಢಿಯು ಬಹಳ ಉಂಟು

I do not like it *myself* ಅದು (ಸ್ವತಃ) ನನ್ನ ಮನಸಿಗೆ ಬರುವದಿಲ್ಲ.

೫೦ ಕರ್ಮಸ್ಥಾನದಲ್ಲಿ ಈ ಶಬ್ದಗಳನ್ನು ಇಟ್ಟರೆ, ಇವುಗಳ ಅರ್ಥವು ತನ್ನನ್ನು ತಾನೇ, ತನಗೆ ತಾನೇ ಎಂತಾಗುತ್ತದೆ. ಉದಾ—

He is hurting *himself* ಅವನು ತನಗೆ ತಾನೇ ನೋವು ಮಾಡಿಕೊಳ್ಳುತ್ತಲಿದ್ದಾನೆ.

೫೧ ಸ್ವಂತದ್ದು ಎಂಬದಕ್ಕೆ own ಎಂಬ ವಿಶೇಷಣವನ್ನು ಪ್ರಯೋಗಿಸುವರು. ಅದು I, thou, he, she, it ಎಂಬವುಗಳ ಷಷ್ಠೀ ವಿಭಕ್ತಿಯ ಮುಂದೆ ಬರುತ್ತದೆ.

ಉದಾ:—This is my *own* book ಇದು ನನ್ನ ಸ್ವಂತದ ಪುಸ್ತಕವು.

## ೫೨ ಶಬ್ದಸಂಗ್ರಹ ೧೦.

| | | | |
|---|---|---|---|
| A gen'tle'man | ಸಭ್ಯ ಗೃಹಸ್ಥ. | A purse | (ಹಣದ) ಚೀಲ. |
| A la'dy | ದೊರೆಸಾನಿ, ಸಭ್ಯಸ್ತ್ರೀ, ಕುಲೀನ. | Mer'cy | ದಯೆ. |
| A wound | ಗಾಯ. | To dress | ಪೋಷಾಕು ಹಾಕಿಕೊ. |
| To wound | ಗಾಯ ಮಾಡು. | ಅತಿಥಿ, ಅಭ್ಯಾಗತ | a guest. |

| | | | |
|---|---|---|---|
| ಮಸಿ ಹೀರುವ ಕಾಗದ, ಒತ್ತುಕಾಗದ | blot'ting'paper. | ಚಿತ್ರ | a picture. |
| ಪರಕೀಯ ಮನುಷ್ಯ | a stran'ger. | ಐಶ್ವರ್ಯವಂತ ಮಾಡು, ಸಂತುಷ್ಟಗೊಳಿಸು | to en-rich. |
| ಕಲಿಸು | to teach. | | |
| ತೂಗು | to weigh. | ತೂಕ | weight. |

## ಭಾಷಾಂತರಪಾಠ ೧೦.

೩೬. 1. He will not hide *himself*. 2. The girl was amusing *herself*. 3. How will you amuse *yourselves*? 4. The gentlemen will amuse *themselves*. 5. Who will praise *himself*? 6. I believe it *myself*. 7 you are frightening *yourself*. 8. Who will recommend *himself*? 9. The child is hurting *itself*. 10. She was doing it *herself*. 11 You do not believe it *yourselves*. 12. My husband and *myself* were reading. 13. You do not believe it *yourself*. 14. You *yourself* will reward him. 15. Will you dress *yourself*? 16 I was dressing[2] his wound. 17. You do not see your *own* faults. 18 Is that his *own* purse? 19. You have got my book, where is your *own*? 20 God is mercy *itself*[3].

೧ ಅವನು ತಾನೇ ಬರಲಿಕ್ಕಿಲ್ಲ. ೨ ಆಕೆಯು ತನ್ನಷ್ಟಕ್ಕೆ ತಾನೇ ಹಾಡುತ್ತಿದ್ದಳು. ೩ ಆ ದೊರೆಸಾನಿಯು ತನ್ನ ಹೆಣ್ಣು ಮಕ್ಕಳಿಗೆ ಕಲಿಸುತ್ತಿದ್ದಳು. ೪ ಅವನು ತಾನೇ ಆ ಪೆಟ್ಟಿಗೆಯನ್ನು ತೂಗುತ್ತಿದ್ದನು. ೫ ಅವನು ತಾನೇ ತನ್ನ ಗಾಯವನ್ನು ತೊಳಕೊಳ್ಳುತ್ತಿದ್ದನು. ೬ ನೀನು ಯಾಕೆ ಪೋಷಾಕು ಹಾಕಿಕೊಳ್ಳುವದಿಲ್ಲ? ೭ ಈ ಪತ್ರದ ತೂಕವನ್ನು ನೀನು ಹ್ಯಾಗೆ ತೆಗೆಯುವಿ[4]? ೮ ನಾನು ಈ ಕೆಲಸವನ್ನು ಸ್ವತಃ ಮಾಡುತ್ತಿರುವದಿಲ್ಲ. ೯ ಅವನು ಸ್ವತಃ ನಿನ್ನನ್ನು ಕೇಳುವನು.

1) ಈ ಶಬ್ದದ ಕೊನೆಯಲ್ಲಿರುವ ture ಎಂಬದರ ಉಚ್ಚಾರ 'ಚರ್' ಆಗುತ್ತದೆ.
2) To dress a wound—ಗಾಯ ತೊಳೆದು ಮಲಂಪಟ್ಟಿ ಹಚ್ಚಿ ಕಟ್ಟೋಣಿಕೆ.
3) ಮೂರ್ತಿಮಂತ, ಸಾಕ್ಷಾತ್. 4) To find.

೧೦ ಆವನು ಸ್ವತಃ ನನಗೆ ಕೆಲವು ಚಿತ್ರಗಳನ್ನು ತೋರಿಸುತ್ತಿದ್ದನು. ೧೧ ಆವನು ನಿನಗೆ ಏನು ಕಲಿಸುತ್ತಿರುತ್ತಾನೆ¹ ? ೧೨ ಇವು ಯಾವ ಚಿತ್ರಗಳು ? ೧೩ ಅವು ನನ್ನವಲ್ಲ. ೧೪ ಇದು ನಿನ್ನ ಸ್ವಂತ ಚೀಲವೋ ? ೧೫ ಆ ದೌತಿಯು ನಿನ್ನದೋ ? ೧೬ ಅದನ್ನು ನನಗೆ ಒಂದು ಕ್ಷಣಹೊತ್ತು ಕೊಡುತ್ತೀಯಾ ? ೧೭ ಈ ಮಸಿ ಹೀರುವ ಕಾಗದವು ಯಾರದು ? ೧೮ ಈ ಬಂಡಿಯು ಯಾರದು ? ೧೯ ಈ ಮನೆಯ ಯಜಮಾನರು ಯಾರು ? ೨೦ ಅದು ನಮ್ಮ ಸ್ವಂತ ಮನೆಯು. ೨೧ ಆವನು ತನಗೆ ತಾನೇ ಗಾಯ ಮಾಡಿಕೊಳ್ಳುತ್ತಲಿದ್ದಾನೆ. ೨೨ ಈತನೇ ನಿನ್ನ ಅತಿಥಿಯೋ ? ೨೩ ಆತನು ಪರಕೀಯ ಮನುಷ್ಯನು. ೨೪ ನೀನು ಐಶ್ವರ್ಯವಂತನಾಗುತ್ತಿದ್ದೀ. ೨೫ ನಾವು ನಮ್ಮ ಮಕ್ಕಳ ಮೇಲೆ ಪ್ರೀತಿ ಮಾಡುತ್ತೇವೆ. ೨೬ ನೀನೇ ಹೋಗುವಿಯಾ ? ೨೭ ನಾನೇ ನಿನಗೆ ಪತ್ರಾ ಬರೆಯುವೆನು. ೨೮ ನಿನಗೆ ಏನು ಬೇಕು ? ೨೯ ಇಂಥ ಸಜ್ಜನನು ನಮಗೆ ಎಲ್ಲಿ ದೊರಕುವನು ? ೩೦ ಇಂಥ ಉದ್ಯೋಗವು ನಿನ್ನ ಮನಸಿಗೆ ಹೇಗೆ ಬರುತ್ತದೆ ?

---

# ೧೧ ನೇ ಪಾಠ.

## ವಿಶೇಷಣಗಳ ತಾರತಮ್ಯಭಾವ.

## Comparison of Adjectives.

೫೪ ಇಂಗ್ಲಿಷದಲ್ಲಿ ವಿಶೇಷಣಗಳ ತಾರತಮ್ಯಭಾವವನ್ನು ತೋರಿಸುವ ಹಾದಳೆ, ಅವುಗಳಿಗೆ er ಇಲ್ಲವೆ est ಎಂಬ ಪ್ರತ್ಯಯವನ್ನು ಹಚ್ಚುತ್ತಾರೆ.

ವಿಶೇಷಣದ ಮೂಲ ರೂಪವು Positive degree ಯಲ್ಲಿ ಇರುತ್ತದೆ. ಒಂದು ವಸ್ತುವಿನಲ್ಲಿ ಮತ್ತೊಂದಕ್ಕಿಂತ ಯಾವದಾದರೊಂದು ಗುಣವು ಹೆಚ್ಚಿಗಿದೆ, ಕಡಿಮೆ ಇದೆ ಎಂದು ತೋರಿಸುವದಕ್ಕೆ Comparative degree ಯನ್ನು ಉಪಯೋಗಿಸುತ್ತಾರೆ; ಎರಡಕ್ಕಿಂತ ಹೆಚ್ಚು ವಸ್ತುಗಳೊಳಗಿನ ಒಂದು ವಸ್ತುವಿನಲ್ಲಿ ಉಳಿದ ಎಲ್ಲವುಗಳಿಗಿಂತ ಯಾವದಾದರೊಂದು ಗುಣವು ಹೆಚ್ಚಿಗಿದೆ, ಎಂದು ತೋರಿಸುವದಕ್ಕೆ Superlative degree ಯನ್ನು ಉಪಯೋಗಿಸುತ್ತಾರೆ.

೫೫ ಒಂದೇ ಅವಯವವುಳ್ಳ ಅಥವಾ ಅಂತ್ಯದಲ್ಲಿ ಸ್ವರವಿರುವಂಥ ಕೆಲವು ಎರಡು ಅವಯವಗಳುಳ್ಳ ವಿಶೇಷಣಗಳಿಗೆ *er, est* ಎಂಬ ಪ್ರತ್ಯಯಗಳನ್ನು

---

1) To teach, to tell, to ask to give ಎಂಬವು ದ್ವಿಕರ್ಮಕ ಕ್ರಿಯಾಪದಗಳು.

ಹಚ್ಚುವದರಿಂದ ಅನುಕ್ರಮವಾಗಿ Comparative ಮತ್ತು Superlative degree ಗಳಾಗುತ್ತವೆ. ಉದಾ:—

| *Positive.* | *Comparative.* | *Superlative.* |
|---|---|---|
| Great | Greater | Greatest |

೫೭. *Er, est* ಎಂಬ ಪ್ರತ್ಯಯುಗಳನ್ನು ಹಚ್ಚುವಾಗ ಮೊದಲನೇ ಪುಸ್ತಕದೊಳಗಿನ ೫ ನೇ, ೭ ನೇ, ೮ ನೇ ಕಲಮುಗಳಲ್ಲಿ ಹೇಳಿದ ನಿಯಮುಗಳನ್ನು ಅನುಸರಿಸಬೇಕು. ಉದಾ:—

| | | | |
|---|---|---|---|
| Hot | ಬಿಸಿ | hotter | hottest. |
| Happy | ಸುಖಿ | happier | happiest. |
| Wise | ಬುದ್ಧಿವಂತ | wiser | wisest |

೫೭. ಎರಡು ವಸ್ತುಗಳನ್ನು ಸರಿ ಹಚ್ಚಿ ನೋಡುವಾಗ ಅವುಗಳನ್ನು ಒಂದೇ ವಿಭಕ್ತಿಯಲ್ಲಿಡಬೇಕು, ಮತ್ತು ವಿಶೇಷಣಕ್ಕೆ *er* ಎಂಬ ಪ್ರತ್ಯಯವನ್ನು ಹಚ್ಚಿ Comparative degree ಮಾಡುವಾಗ ಮುಂದೆ *than* ( ಇಂತ ) ಎಂಬ ಸಮುಚ್ಚಾಯಕಾವ್ಯಯವನ್ನು ಹಾಕಬೇಕು. ಉದಾ.—

He is wiser than *I* ಅವನು ನನಗಿಂತ ಬುದ್ಧಿವಂತನು.

You love *him* more than *me* ನೀನು ನನಗಿಂತ ಅವನ ಮೇಲೆ ಹೆಚ್ಚು ಪ್ರೀತಿ ಮಾಡುತ್ತೀ.

He is kinder *to you* than to *me* ಅವನ ದಯವು ನನಗಿಂತ ನಿನ್ನ ಮೇಲೆ ಹೆಚ್ಚು ಅದೆ.

ಇಂತ ಎಂಬ ಪ್ರತ್ಯಯವು ಕನ್ನಡದಲ್ಲಿ ಉಪಸರ್ಗಾವ್ಯಯವದೆ. ಆದರೆ than ಎಂಬದು ಇಂಗ್ಲಿಷದಲ್ಲಿ ಸಮುಚ್ಚಾಯಕಾವ್ಯಯವಾಗುತ್ತದೆ. ಯಾಕಂದರೆ, ಮೊದಲನೇ ವಾಕ್ಯದಲ್ಲಿ than ಎಂಬ ಶಬ್ದವು he is wiser ಮತ್ತು I am ಎಂಬ ಎರಡು ವಾಕ್ಯಗಳನ್ನು ಕೂಡಿಸುತ್ತದೆ.

೫೮ Est ಎಂಬ ಪ್ರತ್ಯಯವನ್ನು ಹಚ್ಚುವಾಗ ವಿಶೇಷಣದ ಹಿಂದೆ the ಎಂಬ ಉಪಪದವೂ ಮುಂದೆ ಷಷ್ಠೀ ವಿಭಕ್ತಿಯೂ ಬರುತ್ತವೆ. ಈ ಷಷ್ಠೀ ವಿಭಕ್ತಿಯ ಅರ್ಥವು ಅಲ್ಲಿ, ಒಳಗೆ, ಎಂತ ಎಂತಾಗುತ್ತದೆ. ಉದಾ:—

Socrates was the wisest of the Athenians ಸಾಕ್ರೆಟಿಸನು ಅಥೀನಿಯನ್ ಜನರೊಳಗೆ (ಎಲ್ಲರಿಗಿಂತ) ಬುದ್ಧಿವಂತನಿದ್ದನು.

ಶ್ರ Than ಎಂಬ ಶಬ್ದದಿಂದ ಕೂಡಿದ ಎರಡು ವಾಕ್ಯಗಳಲ್ಲಿ ಒಂದರೊಳಗಿನ ಒಂದು ನಾಮಪದವು ಎರಡನೇ ವಾಕ್ಯದೊಳಗೆ ತಿರುಗಿ ಬಂದರೆ, ಅದಕ್ಕೆ ಬದಲಾಗಿ ಏಕವಚನದಲ್ಲಿ that ಎಂಬ ಶಬ್ದವನ್ನೂ, ಬಹುವಚನದಲ್ಲಿ those ಎಂಬದನ್ನೂ ಪ್ರಯೋಗಿಸಬೇಕು. ಕ್ರಿಯಾಪದವಿರಲು, ಅದಕ್ಕೆ ಬದಲಾಗಿ do ಎಂಬ ಕ್ರಿಯಾಪದವನ್ನು ಉಪಯೋಗಿಸಬೇಕು. ಇಲ್ಲವೆ ಅಧ್ಯಾಹಾರ ಮಾಡಬೇಕು.

ಉದಾ:—Your coat is bigger *than* that of your brother, ನಿನ್ನ ತಮ್ಮನ ಅಂಗಿಗಿಂತ ನಿನ್ನ ಅಂಗಿಯು ದೊಡ್ಡದು,

He knows more than you (*do*) ನಿನಗಿಂತ ಅವನು ಹೆಚ್ಚಿಗೆ ಬಲ್ಲನು.

### ೬೦ ಶಬ್ದಸಂಗ್ರಹ ೧೧.

| | | | |
|---|---|---|---|
| Noble | ೧ ಉದಾರ; ೨ ಕುಲೀನ; ೩ ಘನತೆಯುಳ್ಳ. | Ea'sy | ಸಸಾರ, ಸುಲಭವಾದ, |
| Mild | ಶಾಂತ, ಸೌಮ್ಯ. | Light | ೧ ಹಗುರು, ೨ ಬೆಳಕು, |
| Dif'fer'ent | ಬೇರೆ. | Pre'cious | ಬೆಲೆಯುಳ್ಳ. |
| Size | ಆಕಾರಮಾನ, ಉದ್ದಗಲ, ಅಳತೆ, ಪರಿಮಾಣ. | Rain | ಮಳೆ. |
| Mer'cu-ry | ಪಾದರಸ, ಪಾರಜ. | A ru'by | ಮಾಣಿಕ. |
| A jew'el | ರತ್ನ. | A pearl | ಮುತ್ತು. |
| A sap'phire | ನೀಲ. | The world[2] | ಜಗತ್ತು, ಲೋಕ. |
| A shrub | ಪೊದೆ, ಕಂಟಿ. | A ray | ಕಿರಣ. |
| An herb[1] | ವನಸ್ಪತಿ. | A mer'chant | ವರ್ತಕ, ವ್ಯಾಪಾರಸ್ಥ. |
| ವರ್ಗ | a class. | ವಜ್ರ | a di'amond. |

1) ಯಾವ ಗಿಡದ ಬೇರು ಪ್ರತಿ ವರುಷಕ್ಕೆ ಒಣಗಿ ಗಿಡ ಸಾಯುತ್ತದೋ ಆ ಗಿಡಕ್ಕೂ, ಕೆಲವು ತರದ ಪಲ್ಯಕ್ಕೂ, ಔಷಧಿ ವನಸ್ಪತಿಗಳಿಗೂ, ಸಕಲ ತರದ ಹುಲ್ಲಿಗೂ ಈ ಶಬ್ದವನ್ನು ಹಚ್ಚುತ್ತಾರೆ. ಈ ಶಬ್ದದೊಳಗಿನ h ದ ಉಚ್ಚಾರವಾಗುವದಿಲ್ಲ.

| | | | |
|---|---|---|---|
| ಶಾಲೆ | school. | ಪಚ್ಚೆ | An e'me-rald. |
| ಪೃಥ್ವಿ, ಭೂಲೋಕ | The earth[1]. | ಸುಂದರವಾದ, ರಮಣೀಯವಾದ | lov'ely |

## ಭಾಷಾಂತರಪಾಠ ೧೧.

ಇಂ 1. Rama is taller than Govind. 2. Hari is the tallest of the three. 3. The leaves of this tree are not larger than those of that shrub. 4. Oil is lighter than water. 5. Mercury is heavier than water, 6. You will get reward. 7. His clothes are cleaner than yours 8. The sun is brighter than the moon. 9. The rays of the moon are milder than those of the sun. 10. These lessons are easier than those. 11. The ruby is a precious stone[2] of red colour. 12. Pearls are of different sizes. 13. Some merchants are richer than princes. 14. The inhabitants of Europe are taller than those of Asia 15. Who is stronger of the two? 16. You are bolder[3] than you were. 17. Some poor men are happier than kings. 18. Rain-water is purer than the water of lakes and rivers. 19. Silver is cheaper than gold. 20. Your stick is shorter than Rama's. 21. My unkle's dog is bigger than mine. 22. Sapphire is next in hardness to the diamond. 23. Queen Victoria had a very noble heart.

೧ ಕೆಲವು ಪಶುಗಳಿಗೆ ಇತರ ಪಶುಗಳಿಗಿಂತ ಹೆಚ್ಚು ಬುದ್ಧಿ[4] ಇರುತ್ತದೆ. ೨. ಎಲ್ಲ ವಸ್ತುಗಳಲ್ಲಿ ವಜ್ರವು ಕಠಿಣವಾದದ್ದು. ೩. ಪಚ್ಚದ ವರ್ಣವು ಹಸರು.

---

1) The 'earth' ಎಂಬದರಿಂದ 'ಪೃಥ್ವಿಯ' ಬಹಿರಂಗ ಸ್ವರೂಪ, ಭೂರಚನೆ ಮುಂತಾದವುಗಳ ಬೋಧವಾಗುತ್ತದೆ; ಆದರೆ the 'world' ಎಂಬದರಿಂದ ಜನರಿಂದ ವಾಸವಾಗಿರುವ 'ಭೂಮಿ, ಜಗತ್ತು' ಎಂಬ ಅರ್ಥ ತೋರದುತ್ತದೆ. 2) A precious stone = ರತ್ನ, ಮಣಿ. 3) Bold ಎಂಬ ಶಬ್ದದ ಮೂಲ ಅರ್ಥ 'ದಿಟ್ಟ' ಆದರೆ ಈಗ ಅರ್ಥವು ಸಾಧಾರಣವಾಗಿ 'ಸೊಕ್ಕಿನ' ಎಂತ ಆಗುತ್ತದೆ. 4) ಪಶುಗಳ ಬುದ್ಧಿ = instinct, ಮನುಷ್ಯರ ಬುದ್ಧಿ = reason.

೪ ಈ ಮನುಷ್ಯನು ನನಗಿಂತ ಬಡವನು. ೫ ನಿಮ್ಮ ಕನ್ನಡಿಗಿಂತ ನಮ್ಮ ಕನ್ನಡಿಯು ದಪ್ಪವದೆ. ೬ ನಿನ್ನ ತಂದೆಗಿಂತ ನಿನ್ನ ಕಕ್ಕನು ಐಶ್ವರ್ಯವಂತನಿದ್ದಾನೆ. ೭ ಕೆಲವರು ಹೆಂಗಸರು ಗಂಡಸರಿಗಿಂತ ದಿಟ್ಟರಿರುತ್ತಾರೆ. ೮ ನೀನು ಅಶಕ್ತನು; ನಿನ್ನ ತಂಗಿಯು ನಿನಗಿಂತ ಅಶಕ್ತಳು, ೯ ಆ ಬಾವಿಗಿಂತ ಈ ಬಾವಿಯು ಆಳವಾಗಿಲ್ಲವೋ? ೧೦ ಆ ಹುಡುಗನು ಎಲ್ಲರಿಗಿಂತ ಎತ್ತರನಿದ್ದಾನೆ. ೧೧ ಅವನಿಗಿಂತ ನೀನು ಎತ್ತರ ಇದ್ದೀಯಾ? ೧೨ ಅನೇಕ ಹುಡುಗರ ಕೈಗಳು ಸ್ವಚ್ಛವಿರುವದಿಲ್ಲ. ೧೩ ಆ ಎಲ್ಲ ಚಾಕುಗಳಿಗಿಂತ ಇದು ಹದನವಿತ್ತು. ೧೪ ತಾಮ್ರಕ್ಕಿಂತ ಬಂಗಾರವು ತುಟ್ಟಿ ಇರುತ್ತದೆ. ೧೫ ಬಂಗಾರಕ್ಕಿಂತ ಕಬ್ಬಿಣವು ಬಿರುಸು ಇರುತ್ತದೆ. ೧೬ ಪೃಥ್ವಿಗಿಂತ ಸೂರ್ಯನು ದೊಡ್ಡವನು. ೧೭ ಆ ಹುಡುಗಿಗಿಂತ ನಿಮ್ಮ ಹುಡುಗೆಯು ಜಾಣೆ. ೧೮ ಆ ಹುಡುಗನ ಅಂಗಿಯು ಸಣ್ಣದು. ೧೯ ಈ ಪುಷ್ಟ ಮನುಷ್ಯನ ಅಂಗಿಯು ಎಲ್ಲ ಅಂಗಿಗಳಿಗಿಂತ ದೊಡ್ಡದು. ೨೦ ಈ ಶಾಲೆಯೊಳಗಿನ ಯಾವತ್ತು ವರ್ಗಗಳಲ್ಲಿ ಈ ವರ್ಗವು ಉತ್ತಮವಾದದ್ದು. ೨೧ ಇದಕ್ಕಿಂತ ಅದು ರಮಣೀಯವಾದದ್ದು. ೨೨ ತಾಯಿಗಿಂತ ಬಂಧುವಿಲ್ಲ; ಉಪ್ಪಿಗಿಂತ ರುಚಿಯಿಲ್ಲ[1] ೨೩ ಇಕೋ ನೋಡಿರಿ[2], ಈ ಹೊಸ ತೊಟ್ಟಿಲು ನಿಮ್ಮ ತೊಟ್ಟಿಲಿಗಿಂತ ಚಂದವದೆ. ೨೪ ಪೇರಲಹಣ್ಣಿಗಿಂತ ಮಾವಿನಹಣ್ಣು ಹೆಚ್ಚು ರುಚಿಕರವಾದದ್ದು.

---

## ೧೨ ನೇ ಪಾಠ.

### ವಿಶೇಷಣಗಳ ತಾರತಮ್ಯಭಾವ ( ಮುಂದೆ ಸಾಗಿದ್ದು ).

### Comparison of Adjectives ( *Continued* ).

ತಿ ೬೨ ಎರಡು ಅಥವಾ ಹೆಚ್ಚು ಅವಯವಗಳುಳ್ಳ ವಿಶೇಷಣಗಳ ತಾರತಮ್ಯಭಾವವನ್ನು ತೋರಿಸುವದಾದರೆ, ಹಿಂದೆ more ಹೆಚ್ಚು, ಇಲ್ಲವೆ most ಅತಿ ಹೆಚ್ಚು ಎಂಬ ಶಬ್ದಗಳನ್ನು ಹಾಕಬೇಕು. ಉದಾ—

| *Positive.* | *Comparative.* | *Superlative* |
|---|---|---|
| Gen'er-ous ಉದಾರವಾದ | *more* generous | *most* generous. |

೬೩ ಕೆಲವು ವಿಶೇಷಣಗಳ ತಾರತಮ್ಯಭಾವದರ್ಶಕ ರೂಪಗಳು ನಿಯಮದಂತೆ ಆಗುವದಿಲ್ಲ.

---

1) None is dearer than mother; nothing, more tasty than salt. 2) Look here or Behold.

6 ii

ಉದಾ—

| *Positive* | | *Comparative* | *Superlative* |
|---|---|---|---|
| Good | ಒಳ್ಳೇ | bet'ter | best. |
| Bad | ಕೆಟ್ಟ | worse | worst. |
| Lit'tle | ಸ್ವಲ್ಪ, ಕುಸು | less | least. |
| Much[1] | ಬಹಳ | more | most. |
| Many | ಬಹಳ, ಅನೇಕ | more | most. |
| Old | ವೃದ್ಧ, ಮುದಿ, ಹಳೇ | {old'er<br>{eld'er | old'est.<br>eld'est. |

ಓಳ Older, oldest ಎಂಬ ರೂಪಗಳನ್ನು ಯಾವದಾದರೊಂದು ಪ್ರಾಣಿಗಾಗಲಿ, ಪದಾರ್ಥಕ್ಕಾಗಲಿ ಹಚ್ಚಬಹುದು. Elder ಎಂಬ ಶಬ್ದದ ಅರ್ಥವು ಹಿರಿಯ ಎಂತಲೂ, eldest[2] ದ ಅರ್ಥವು ಎಲ್ಲರಲ್ಲಿ ಹಿರಿಯ ಎಂತಲೂ ಆಗುತ್ತದೆ. old ಎಂಬ ಶಬ್ದವನ್ನು ವಯಸ್ಸು ಹೇಳುವಾಗ ಸಹ ಉಪಯೋಗಿಸುತ್ತಾರೆ.

ಉದಾ—The child is three years *old* ಕೂಸು ಮೂರು ವರ್ಷದ್ದು.

How *old* are you ? ನಿನ್ನ ವಯುಸ್ಸು ಎಷ್ಟು ?
ಅಥವಾ ನಿನಗೆ ಎಷ್ಟು ವರ್ಷಗಳಾಗಿವೆ ?

ಈ ಮೇರೆಗೆ older ದ ಅರ್ಥವು ವಯುಸ್ಸಿನಿಂದ ಹಿರಿಯ ಅಥವಾ ದೊಡ್ಡ ಎಂತಾಗುತ್ತದೆ.

ಉದಾ—I am *older* than you ನಾನು ನಿನಗಿಂತ (ವಯುಸ್ಸಿನಿಂದ) ದೊಡ್ಡವನು.

---

1) Many ಎಂಬ ವಿಶೇಷಣವು ಸಂಖ್ಯೆಯನ್ನೂ Much ಎಂಬದು ಪರಿಮಾಣವನ್ನೂ ತೋರಿಸುತ್ತವೆ. ಉದಾ-Many men ಅನೇಕ ಜನರು, Much sugar ಬಹಳ ಸಕ್ಕರೆ.

2) Elder, eldest ಎಂಬ ಶಬ್ದಗಳನ್ನು ಒಂದೇ ಕುಟುಂಬದೊಳಗಿನ ಮನುಷ್ಯರಿಗೆ ಮಾತ್ರ ಹಚ್ಚಬಹುದು; ಉದಾ-my elder brother ನನ್ನ ಅಣ್ಣ, my eldest son ನನ್ನ ಹಿರೀ ಮಗನು. Elder ದ ಮುಂದೆ than ಎಂಬ ಸಮುಚ್ಚಾಯಕಾವ್ಯಯವು ಬರುವದಿಲ್ಲ. He is elder than I ಎಂಬದು ತಪ್ಪು; he is older than I ಅನ್ನಬೇಕು.

## ೩೫ ಶಬ್ದಸಂಗ್ರಹ ೧೨.

| | | | |
|---|---|---|---|
| Dili-gent | ಜಾಗ್ರತೆಯುಳ್ಳ, ಉದ್ಯೋಗಿ, ತತ್ಪರ, ಆಸಕ್ತ | De-sir'a-ble | ಇಷ್ಟ, ಬೇಕಾದ. ಅಪೇಕ್ಷಿಸತಕ್ಕ. |
| Whole'some | ಆರೋಗ್ಯಕರ, ಹಿತಕರ. | Ig'no-rant | ಅಜ್ಞಾನಿಯಾದ, ತಿಳಿಗೇಡಿ. |
| Gay | ಉಲ್ಲಾಸವುಳ್ಳ, ಸೊಗಸಿನ. | Learn'ed | ವಿದ್ವಾಂಸನಾದ, ಓದಿಕೊಂಡ, ಪಾಂಡಿತ್ಯವುಳ್ಳ. |
| Va-lu-able | ಬೆಲೆಯುಳ್ಳ, ಅಮೂಲ್ಯ. | A drink | ಕುಡಿಯುವ ಪೇಯ, ಪಾನಕ. |
| Cost'ly | ಬಹು ಬೆಲೆಯುಳ್ಳ, ಬಹಳ ಕ್ರಯದ. | Friend'ship | ಸ್ನೇಹ, ಗೆಳೆತನ. |
| Po-lite' | ಆದರಶೀಲ, ಉಪಚಾರದ, ನಮ್ರ, ಮರ್ಯಾದೆಯುಳ್ಳ. | Con'duct | ನಡತೆ, ಆಚರಣೆ. |
| To prefer' | (ಹೆಚ್ಚಿಗೆ) ಮನಸಿಗೆ ಬರು, ಇಷ್ಟಪಡು, ಆಯ್ದುಕೊಳ್ಳು. | Old-age | ಮುಪ್ಪು, ವಾರ್ಧಕ್ಯ. |
| To flat'ter | ಮುಖಸ್ತುತಿ ಮಾಡು. | Dif'ficult | ಕಠಿಣ, ಗಡುಚು, ಬಿಗಿ, ಬಿರು. |
| A flat'ter-er | ಮುಖಸ್ತುತಿ ಮಾಡುವವ. | Wis'dom | ಬುದ್ಧಿ, ಜಾಣತನ. |
| Age | ವಯಸ್ಸು. | Knowl'edge | ಜ್ಞಾನ. |
| fickle | ಚಂಚಲ. | Ig'no-rance' | ಅಜ್ಞಾನ. |

## ಭಾಷಾಂತರಪಾಠ ೧೨.

ಅ. 1 These children are *more* attentive and diligent than those. 2 This boy is the *most* diligent of all. 3 Some poor men are *more* honest than some rich men. 4 Are the richest persons the *most* honest? 5 Water is the *most* wholesome drink. 6 Will you give me a glass of water? 7 He is the *gayest* of the gay. 8 Good books are *more* valuable than fine clothes. 9 Is not milk *more* wholesome than wine? 10 This is the *most* useful of all those books. 11 He is *more* polite than his wife. 12 Friends are *better* than flatterers. 13 The *oldest* friends are best. 14 My *eldest* brother is the *oldest* of the officer 15 What

is your *eldest* brother doing? 16 The farmer has much corn. 17 His conduct is *worse* than that of his younger brother. 18 This book is *more* costly than yours. 19 Iron is the *most* useful of metals. 20 The Greeks were *more* learned than Romans. 21 What is *more* desirable than virtue.

೧ ನಿಮ್ಮ ತಮ್ಮನಿಗೆ ಎಷ್ಟು ವರುಷ? ೨ ಗೋವಿಂದನಿಗಿಂತ ರಾಮನು (ವಯಸ್ಸಿನಿಂದ) ದೊಡ್ಡವನು. ೩ ನಿಮ್ಮ ಅಕ್ಕ ಎಲ್ಲಿ ಇದ್ದಾಳೆ? ೪ ಆ ಪೊದೆಗಿಂತ ಈ ಗಿಡವು ಹಳೇದು. ೫ ಆ ಮನೆಯು ಎಲ್ಲ ಮನೆಗಳಲ್ಲಿ ಹಳೇದು. ೬ ಈ ಕೂಸು ಒಂದು ವರುಷದ್ದು. ೭ ನಿಮ್ಮ ಹಿರಿಯರು[1] ಏನು ಮಾಡುತ್ತಿದ್ದಾರೆ? ೮ ಆ ನಾಲ್ಕು ಮಂದಿ ತಮ್ಮಂದಿರೊಳಗೆ ಎಲ್ಲರಿಗೂ ಹಿರಿಯವನು ಎಲ್ಲಿ ಇರುತ್ತಾನೆ? ೯ ಅವನಿಗೆ ಮನೆಗಳು ಬಹಳ ಅವೆ. ೧೦ ಈ ಹೆಂಗಸು ಬಹಳ ಉದ್ಯೋಗಿಯು. ೧೧ ನನಗೆ ಹೆಚ್ಚು ಅನ್ನ ಬೇಕು. ೧೨ ಈ ಊರಿಗಿಂತ ಆ ಹಳ್ಳಿಯು ಚಲೋದು. ೧೩ ಹೆಂಗಸರಿಗಿಂತ ಗಂಡಸರು ಗಟ್ಟಿಗರಿರುತ್ತಾರೆ. ೧೪ ಬಂಗಾರಕ್ಕಿಂತ ಕಬ್ಬಿಣವು ಹೆಚ್ಚು ಉಪಯೋಗವುಳ್ಳದ್ದು. ೧೫ ಆ ಕೆಲಸವು ಹೆಚ್ಚು ಕಠಿಣವಾದದ್ದು. ೧೬ ಬುದ್ಧಿಗಿಂತ ಹೆಚ್ಚಿನದು ಯಾವದು? ೧೭ ಜ್ಞಾನಕ್ಕಿಂತ ಹೆಚ್ಚು ಇಷ್ಟವಾದದ್ದಾವುದು? ೧೮ ಪೃಥ್ವಿಗಿಂತ ಚಂದ್ರನು[2] ಸಣ್ಣವನು ೧೯ ಶ್ರೀಮಂತ ಜನರೆಲ್ಲರು ವಿದ್ವಾಂಸರಾಗಿರುತ್ತಾರೋ? ೨೦ ನೀನು ಅವನ ಮುಖಸ್ತುತಿ ಯಾಕೆ ಮಾಡುತ್ತೀ?

---

## ೧೩ ನೇ ಪಾಠ.

### ಕ್ರಿಯಾವಿಶೇಷಣಗಳು.

### ADVERBS.

೬೭ ಅನೇಕ ವಿಶೇಷಣಗಳಿಗೆ *ly* ಪ್ರತ್ಯಯವನ್ನು ಹಚ್ಚುವದರಿಂದ ಕ್ರಿಯಾವಿಶೇಷಣಗಳಾಗುತ್ತವೆ. ಉದಾ—

Wise ಜಾಣ, Wisely ಜಾಣತನದಿಂದ.

---

1) Father.

2) ಕನ್ನಡದಲ್ಲಿ 'ಚಂದ್ರ' ಪುಲ್ಲಿಂಗವೆಂದು ತಿಳಿದುಕೊಳ್ಳುತ್ತಾರೆ; ಆದರೆ ಇಂಗ್ಲಿಷದಲ್ಲಿ ಅದು ಸ್ತ್ರೀಲಿಂಗವೆಂದು ತಿಳಿಯುತ್ತಾರೆ. [illegible] ನಪುಂಸಕಲಿಂಗದಂತೆ ಹಲ ಉಪಯೋಗಿಸುವರು.

೭೮ True ನಿಜವಾದ, ಇದರಿಂದ Truly ನಿಜವಾಗಿ; due ಯೋಗ್ಯವಾದ, ಇದರಿಂದ duly ಯೋಗ್ಯವಾಗಿ ಎಂಬ ಕ್ರಿಯಾವಿಶೇಷಣಗಳಾಗುತ್ತವೆ.

೭೯ ಕ್ರಿಯಾವಿಶೇಷಣಗಳು[1] ಬಹುತರವಾಗಿ ಅವುಗಳ ಸಂಬಂಧವಿರುವ ಕ್ರಿಯಾಪದಗಳ ಮುಂದೆ ಬರುತ್ತವೆ. ಉದಾ—

He reads *slowly* ಅವನು ಮೆಲ್ಲಗೆ ಓದುತ್ತಾನೆ.

ಪ್ರಶ್ನಾರ್ಥಕ ಕ್ರಿಯಾವಿಶೇಷಣಗಳು ಮತ್ತು not ಎಂಬ ಕ್ರಿಯಾವಿಶೇಷಣವು ಇವುಗಳ ಬಗ್ಗೆ ಹಿಂದೆ ಹೇಳಿಯದೆ.

೭೦ ಕ್ರಿಯಾಪದವು ಸಕರ್ಮಕವಿದ್ದರೆ, ಕ್ರಿಯಾವಿಶೇಷಣವನ್ನು ಕರ್ಮಪದದ ಮುಂದೆ ಇಡಬೇಕು. ಉದಾ—

He reads the book *slowly* ಅವನು ಆ ಪುಸ್ತಕವನ್ನು ಮೆಲ್ಲಗೆ ಓದುತ್ತಾನೆ.

೭೧ ಎರಡು ಮೂರು ಕ್ರಿಯಾವಿಶೇಷಣಗಳು ಒಂದೇ ಕ್ರಿಯಾಪದಕ್ಕೆ ಸಂಬಂಧಿಸಿರಲಾಗಿ. ಮೊದಲು ಸ್ಥಲವಾಚಕ, ತರುವಾಯ ರೀತಿವಾಚಕ, ಆ ಮೇಲೆ ಕಾಲವಾಚಕ ಈ ಮೇರೆಗೆ ಬರುವವು, ಉದಾ—

He was standing *here quietly yesterday* ಅವನು ನಿನ್ನೆ ಇಲ್ಲಿ ಸುಮ್ಮನೆ ನಿಂತುಕೊಂಡಿದ್ದನು.

ಈ ನಿಯಮವನ್ನು ಯಾವಾಗಲೂ ಅನುಸರಿಸುತ್ತಾರೆಂದು ಹೇಳಕೂಡದು.

೭೨ ಕ್ರಿಯಾವಿಶೇಷಣವು ಒಂದು ವಿಶೇಷಣಕ್ಕಾಗಲಿ ಬೇರೊಂದು ಕ್ರಿಯಾವಿಶೇಷಣಕ್ಕಾಗಲಿ ಸಂಬಂಧಿಸಿದ್ದರೆ, ಆ ಕ್ರಿಯಾವಿಶೇಷಣವನ್ನು ಇವರ ಹಿಂದೆ ಇಡಬೇಕು. ಉದಾ—

*Very* good ಬಹಳ ಒಳ್ಳೇ;
*Very* wisely ಬಹಳ ಜಾಣತನದಿಂದ,

೭೩ ಮುಂದೆ ಬರೆದಿರುವ ನಿಶ್ಚಯಾರ್ಥಕ, ಕಾಲವಾಚಕ ಮುಂತಾದ

1) ಇಂಗ್ಲಿಷದಲ್ಲಿ ಕ್ರಿಯಾವಿಶೇಷಣವು ಕ್ರಿಯಾಪದಕ್ಕಾಗಲಿ ಮತ್ತೊಂದು ಕ್ರಿಯಾವಿಶೇಷಣಕ್ಕಾಗಲಿ, ಗುಣವಿಶೇಷಣಕ್ಕಾಗಲಿ ಸಂಬಂಧಿಸಿರುತ್ತದೆ.

ಹಲವು ಕ್ರಿಯಾವಿಶೇಷಣಗಳು ಬಹುತರವಾಗಿ ಮುಖ್ಯ ಕ್ರಿಯಾಪದದ ಹಿಂದೆ ಬರುತ್ತವೆ.

| | | | |
|---|---|---|---|
| Cer'tain'ly, Sure'ly | ನಿಶ್ಚಯವಾಗಿ, ಖಂಡಿತವಾಗಿ. | Re'ally, in-dee'd | ನಿಜವಾಗಿ. |
| Doubt'less | ನಿಃಸಂಶಯವಾಗಿ. | Chief'ly, Es-pec'ial-ly, Prin'ci-pally | ಮುಖ್ಯವಾಗಿ, ವಿಶೇಷವಾಗಿ. |
| Un-doubt-ed-ly | ನಿಃಸಂದೇಹವಾಗಿ. | | |
| Al'most, Near'ly | ಸ್ವಲ್ಪ ತಪ್ಪಿ, ಬಹುತರವಾಗಿ. | Ex-ceed'ing-ly | ಅತಿಶಯವಾಗಿ, ಬಹಳವಾಗಿ. |
| Quite | ತೀರ ಪೂರಾ, ಅಗದಿ, ಅಪ್ಪಟ. | Scarce-ly | ಕ್ವಚಿತವಾಗಿ. |
| Mere'ly, Simp'ly | ಕೇವಲ, ಮಾತ್ರ, ಬರೆ. | Hard'ly | ಪ್ರಯಾಸದಿಂದ. |
| | | Ve ry[1] | ಬಹಳ, ಮಹಾ. |
| Often | ಬಾರಿಬಾರಿಗೆ, ಅನೇಕಸಾರಿ, ಮೇಲಿಂದ ಮೇಲೆ. | Sel'dom, Rare'ly, Scarce'ly ev'er | ಕ್ವಚಿತವಾಗಿ, ಅಪರೂಪವಾಗಿ. |
| Al'ways | ಯಾವಾಗಲೂ. | | |
| Nev'er | ಎಂದಿಗೂ ಇಲ್ಲ. | | |
| Ev'er | ಎಂದಿಗೂ, ಯಾವಾಗಲೂ, ಎಂದಾದರೂ. | Gen'er-al-ly | ಸಾಧಾರಣವಾಗಿ. |
| | | U'su-al-ly | ವಾಡಿಕೆಯಾಗಿ. |

೭೪ Enough[2] ಬೇಕಾದಷ್ಟು, ಸಾಕಾದಷ್ಟು, ಎಂಬ ಕ್ರಿಯಾವಿಶೇಷಣವು ಯಾವ ಗುಣವಾಚಕಕ್ಕೆ ಸಂಬಂಧಿಸಿರುತ್ತದೋ ಅದರ ಮುಂದೆ ಬರುತ್ತದೆ. ಮತ್ತು ಆ ಗುಣವಾಚಕವಾದರೂ ಬಹುಶಃ ನಾಮಪದದ ಮುಂದೆ ಇರುತ್ತದೆ.

ಉದಾ—This house is large *enough* ಈ ಮನೆಯು ಬೇಕಾದಷ್ಟು ದೊಡ್ಡದದೆ.

1) ಇದು ಯಾವಾಗಲೂ ವಿಶೇಷಣಕ್ಕಾಗಲಿ ಕ್ರಿಯಾವಿಶೇಷಣಕ್ಕಾಗಲಿ ಸಂಬಂಧಿಸಿರುತ್ತದೆ. ಉದಾ—*Very good, very* often.

2) ಈ ಶಬ್ದವು ಒಮ್ಮೊಮ್ಮೆ ನಾಮಪದವು ಒಮ್ಮೊಮ್ಮೆ ವಿಶೇಷಣವು ಆಗುತ್ತದೆ. ಉದಾ—I have *enough* ನನ್ನಲ್ಲಿ ಬೇಕಾದಷ್ಟು ಅದೆ. We have bread *enough* ನಮಗೆ ಬೇಕಾದಷ್ಟು ರೊಟ್ಟಿ ಅದೆ.

## ೭೫ ಶಬ್ದಸಂಗ್ರಹ ೧೩.

| | | | |
|---|---|---|---|
| Here | ಇಲ್ಲಿ, ಇತ್ತ. | Yes'ter-day | ನಿನ್ನೆ. |
| There | ಅಲ್ಲಿ, ಅತ್ತ. | To-day' | ಈಹೊತ್ತು, ಇಂದು |
| Now | ಈಗ. | To-mor'row | ನಾಳೆ. |
| Just now | ಇದೇ ಈಗ. | Badly | ಕೆಟ್ಟ ರೀತಿಯಿಂದ. |
| Then | ಆಗ. | Se-vere'ly | ಕಠೋರತನದಿಂದ. |
| Out | ಹೊರಗೆ. | Im-me'di-ate-ly | ಕೂಡಲೆ, ಸಂಗಡಲೆ |
| Be-fore | ಹಿಂದೆ, ಪೂರ್ವದಲ್ಲಿ. | A foe | ವೈರಿ, ಹಗೆ, ಶತ್ರು. |
| For-ward | ಮುಂದೆ. | A fit | ರೋಗದ ಜೋರು, ಸನ್ನಿ, ಏರೋಗ |
| Up | ಮೇಲೆ. | Mi'ser-y | ಕಷ್ಟ, ಅತಿ ದುಃಖ, ಮಹಾಸಂಕಟ, |
| Down | ಕೆಳಗೆ. | Mad'ness | ಹುಚ್ಚು. |
| Hur'riedly | ಆವಸರದಿಂದ. | An'ger | ಸಿಟ್ಟು, ಕೋಪ. |
| To-geth'er | ಏಕತ್ರವಾಗಿ, ಒಟ್ಟುಗೂಡಿ. | To de-vour | ಗಪಗಪ ತಿನ್ನು; ಹರಕೊಂಡು ತಿನ್ನು. |
| Right'e-ous | ಪುಣ್ಯಶೀಲ, ಧಾರ್ಮಿಕ, ನೀತಿವಂತ. | Care-ful-ly | ಜಾಗ್ರತೆಯಿಂದ, ಲಕ್ಷಪೂರ್ವಕವಾಗಿ. |
| Whole (ಹೋಲ) | ಎಲ್ಲ, ಯಾವತ್ತು, ಇಡಿ. | A dream | ಕನಸು. |
| A mistake | ತಪ್ಪು. | Im-pa'tient-ly | ಆತುರದಿಂದ, ತಾಳ್ಮೆಯಿಂದ |
| ಹೀಗೆ | so[1]. | (ತಪ್ಪದೆ) ನೇಮಿಸಿದ ಹೊತ್ತಿಗೆ, ತಕ್ಕ ಸಮಯಕ್ಕೆ | Punc'tual-ly. |
| ಒಳಗೆ | in. | | |
| ಒಮ್ಮೊಮ್ಮೆ, ಆಗಾಗ್ಗೆ | Some'times. | ಆಶ್ಚರ್ಯಕರವಾದ, ಸೋಜಿಗವುಳ್ಳ. | Won'der-ful. |

1) ಇದು ಒಮ್ಮೊಮ್ಮೆ ದರ್ಶಕಸರ್ವನಾಮ ಸಹ ಆಗುತ್ತದೆ. ೧ ನೇ ಪುಸ್ತಕ ಕಲಮು ೭೫ ನೋಡು.

| | | | |
|---|---|---|---|
| ತಾಸುತಾಸಿಗೆ | hour'ly[1]. | ತಿರುಗಿ ಬರು, ಮರಳು | to re-turn. |
| ದಿನಾಲು, ದೈನಂದಿನ | dai'ly[1]. | ತಿರುಗಿ | back. |
| ತಿಂಗತಿಂಗಳಿಗೆ, ಮಾಸಿಕ | month'ly[1]. | ತೀವ್ರ, ವೇಗದಿಂದ | fast. |
| ವರುಷವರುಷಕ್ಕೆ, ವಾರ್ಷಿಕ | Year'ly[1]. | ತಿರುಗಿ, ಮತ್ತೆ, ಪುನಃ | again'. |

## ಭಾಷಾಂತರಪಾಠ ೧೩.

೬೩ 1 The good boy reads the whole lesson *carefully.* 2 *Where* shall I go? 3 He will *not* swim. 4 You write *very badly.* 5 The master was punihing the disobedient boy *severely.* 6 We were going *there hurriedly yesterday.* 7 Will you come *here tomorrow.* 8 I shall bring him *here immediately.* 9 He is sitting *there impatiently.* 10 *Certainly* this was a righteous man. 11 Your father will *undoubtedly* punish you. 12 *Indeed* this is a *very* bad thing. 13 The gentleman will *surely* come. 14 The dishonest man will *really* not pay you anything. 15 Anger is *often* a short fit of madness. 16 I *almost* hate him. 17 I was *merely* taking my blotting-paper. 18 You are *nearly* making a mistake. 19 He is *quite* right. 20 The hungry man is devouring his food. 21 I *rarely see* you and John *to-gether.* 22 He is a foe to virtue. 23 Misery is *often* the fruit of vice. 24 Wisdom and youth *seldom* go to-gether[2].

೧ ನೀನು ತೀವ್ರವಾಗಿ ನಡೆಯುತ್ತೀ. ೨ ಅವನು ಬಹಳ ಎತ್ತರನಿದ್ದಾನೆ. ೩ ನಾನು ಇಲ್ಲಿ ಇದ್ದೇನೆ. ೪ ನಾನೇ ಅಲ್ಲಿಗೆ ಹೋಗುವೆನು. ೫ ಅವನು

1) ಈ ನಾಲ್ಕು ಶಬ್ದಗಳು ವಿಶೇಷಣಗಳು ಸಹ ಆಗುತ್ತವೆ; ಆಗ ಅವುಗಳ ಅರ್ಥಗಳು ತಾಸುತಾಸಿಗೆ ಆಗುವ, ದಿನಂಪ್ರತಿಯ, ತಿಂಗಳತಿಂಗಳಿನ, ಪ್ರತಿವರ್ಷದ ಎಂತ ಅನುಕ್ರಮವಾಗಿ ಆಗುತ್ತವೆ. ಉದಾ—Hourly prayers ತಾಸುತಾಸಿಗೆ ಆಗುವ ಪ್ರಾರ್ಥನೆಗಳು; a daily paper ದಿನಂಪ್ರತಿ ಹೊರಡುವ ವರ್ತಮಾನಪತ್ರ; a monthly magazine ತಿಂಗತಿಂಗಳಿಗೆ ಹೊರಡುವ ಸಮಾಚಾರ ಪುಸ್ತಕ. his yearly income ಅವನ ಪ್ರತಿ ವರ್ಷದ ಆದಾಯ.

2) Go together ಇದರ ಭಾಷಾಂತರ 'ಕೂಡಿ ಇರುತ್ತವೆ' ಎಂತ ಮಾಡಬೇಕು.

ಖಂಡಿತವಾಗಿ ತಿರುಗಿ ಬರುವನು. ೭ ಅವನು ನಿನ್ನ ಹಣವನ್ನು ನಿನಗೆ ತಿರುಗಿ ಕೊಡನೆಂಬದು ನಿಶ್ಚಯವು. ೭ ಇದು ಬಹು ಆಶ್ಚರ್ಯಕರವಾದ ಮಾತೇ ಸರಿ. ೮. ಇದೇನು ಬಹಳ ಕಠಿಣವಾದ ಕೆಲಸವಲ್ಲವೆಂಬದು ನಿಜವು. ೯ ಅವನು ನಿನಗಿಂತ ದೊಡ್ಡವನು. ೧೦. ಆ ಮುತ್ತು ಬಹಳ ಸಣ್ಣದು. ೧೧ ನಾನು ನನ್ನ ಚಾಕು ಮಾತ್ರ ತೆಗೆದುಕೊಳ್ಳುತ್ತಿದ್ದೆನು. ೧೨ ಅವನು ಎಂದಾದರೂ ಸುಳ್ಳು ಹೇಳುವನೋ? ೧೩ ನೀನು ಅಲ್ಲಿ ಎಂದಿಗೂ ಇರಲಿಕ್ಕಿಲ್ಲ. ೧೪ ನಾನು ತಿರುಗಿ ಹೀಗೆ ಎಂದಿಗೂ ಮಾತಾಡಲಿಕ್ಕಿಲ್ಲ. ೧೫ ಅವನು ನನಗೆ ಹೀಗೆ ಹೇಳುತ್ತಾನೆ. ೧೬ ಅವನು ಹೀಗೆ ಅನ್ನುತ್ತಾನೆ. ೧೭ ಆಕೆಗೆ ಹೀಗೆ ತೋರುತ್ತದೆ. ೧೮ ರಾಮನು ವಿದ್ವಾಂಸನು; ಗೋವಿಂದನಾದರೂ ಅಂಥವನೇ. ೧೯ ಆ ಹಣ್ಣುಗಳು ಇಷ್ಟು ಸಿಹಿಯಾಗಿವೆಯೋ ? ೨೦ ಅವನು ಜಾಣನಿದ್ದಾನೆ, ೨೧ ನೀನು ಯಾವಾಗಲೂ ಹೀಗೆ ಅನ್ನುತ್ತೀ. ೨೨. ನನಗೆ ನಿಜವಾಗಿ ಈ ಮಾತು ಗೊತ್ತಿಲ್ಲ. ೨೩ ಅವನ ಅಣ್ಣನು ಇಲ್ಲಿಗೆ ಯಾವಾಗಲೂ ಬರುತ್ತಾನೆ. ೨೪ ಅವನು ಯಾವಾಗಲೂ ನನಗೆ ಆ ಚಿತ್ರಗಳನ್ನು ತೋರಿಸುತ್ತಾನೆ. ೨೫ ನಿನ್ನ ಸ್ನೇಹಿತನು ಪದೇಪದೇ ನನ್ನನ್ನು ಅಲ್ಲಿಗೆ ಕರೆಯುತ್ತಾನೆ. ೨೬. ನಾವು ಒಮ್ಮೊಮ್ಮೆ ಚಹಾ ಕುಡಿಯುತ್ತೇವೆ; ಒಮ್ಮೊಮ್ಮೆ ಹಾಲು ಕುಡಿಯುತ್ತೇವೆ. ೨೭ ಅವನು ಒಳಗೆ ಇದ್ದಾನೆ. ೨೮ ಅವರು ಮುಂದೆ ಹೋಗುತ್ತಾರೆ. ೨೯ ನಾನು ನಿನ್ನನ್ನು ದಿನಾಲು ಅಲ್ಲಿ ನೋಡುತ್ತೇನೆ. ೩೦ ಅವನಿಗೆ ತಿಂಗಳಿಗೆ ಸಂಬಳವೇನು ? ೩೧ ನಾನು ನಾಳೆಗೆ ನಿಶ್ಚಯವಾಗಿ ಹೋಗುತ್ತೇನೆ. ೩೨ ಅವನು ಮಹಾ ಶಕ್ತನಿದ್ದಾನೆ. ೩೩ ಆಕೆಯು ಬಹಳ ಮೆಲ್ಲಗೆ ನಡೆಯುತ್ತಾಳೆ. ೩೪ ನಾನು ಇಲ್ಲಿಗೆ ತಪ್ಪದೆ ನೇಮಿಸಿದ ಹೊತ್ತಿಗೆ ಬರುತ್ತೇನೆ. ೩೫ ಅಲ್ಲಿ ಎಷ್ಟು ಮಂದಿ ಹೆಂಗಸರಿದ್ದರು ?

## ೧೪ ನೇ ಪಾಠ.

### ಕ್ರಿಯಾವಿಶೇಷಣಗಳ ತಾರತಮ್ಯಭಾವ.

### Comparison of Adverbs.

೭೭. ವಿಶೇಷಣಗಳಿಗೆ *ly* ಎಂಬ ಪ್ರತ್ಯಯವು ಹತ್ತಿ ಆದ ಕ್ರಿಯಾವಿಶೇಷಣಗಳಲ್ಲಿ ಅನೇಕ ಕ್ರಿಯಾವಿಶೇಷಣಗಳ ತಾರತಮ್ಯಭಾವವನ್ನು ವಿಶೇಷಣಗಳಂತೆ more, most ಎಂಬ ಶಬ್ದಗಳಿಂದ ತೋರಿಸುವರು. ಉದಾ :

| *Positive.* | *Comparative.* | *Superlative.* |
|---|---|---|
| Wise'ly | *more* wise'ly | *most* wise'ly |

೭೮. ಕೆಲವು ಕ್ರಿಯಾವಿಶೇಷಣಗಳಿಗೆ *er*, *est* ಎಂಬ ಪ್ರತ್ಯಯಗಳು ಹತ್ತುತ್ತವೆ. ಉದಾ—

| *Positive.* | | *Comparative.* | *Superlative.* |
|---|---|---|---|
| Soon | ಬೇಗ | soon*er* | soon*est*. |
| Often | ಪದೇ ಪದೇ | often*er* | often*est*. |
| Near | ಸಮೀಪ | near*er* | near*est*. |
| | | | ಅಥವಾ next. |

೭೯. ಕೆಲವು ಕ್ರಿಯಾವಿಶೇಷಣಗಳ ರೂಪಗಳು ನಿಯಮದಂತೆ ಆಗುವದಿಲ್ಲ.

| *Positive.* | | *Comparative.* | *Superlative.* |
|---|---|---|---|
| Well | ಚನ್ನಾಗಿ, ನೆಟ್ಟಗೆ | bet'ter | best. |
| Ill / Bad'ly | ಕೆಟ್ಟ | worse | worst. |
| Lit'tle | ಸ್ವಲ್ಪ | less | least. |
| Much | ಬಹಳ | more | most. |
| Far | ದೂರ | farth'er | farth'est. |
| Forth | ಮುಂದೆ | furth'er | furth'est. |

೮೦ ಶಬ್ದಸಂಗ್ರಹ ೧೪.

| | | | |
|---|---|---|---|
| Wil'lingly | ಸಂತೋಷದಿಂದ. | Fre'quent-ly | ಪದೇಪದೇ, ಮೇಲಿಂದಮೇಲೆ. |
| Un-wil'lingly | ಮನಸ್ಸಿಲ್ಲದೆ. | Con'stant-ly | ಸದಾ, ನಿರಂತರ, ಯಾವಾಗಲೂ. |
| Dis-tinct'ly | ಸ್ಪಷ್ಟವಾಗಿ, ಎದ್ದು ಕಾಣುವಂತೆ. | Mer'ri-ly | ಉಲ್ಲಾಸದಿಂದ. |
| Cor-rect'ly | ಶುದ್ಧವಾಗಿ, ಸರಿಯಾಗಿ. | Sweet'ly | ಮಧುರವಾಗಿ, ಸಿಹಿಯಾಗಿ. |
| Fool'ish'ly | ಮೂರ್ಖತನದಿಂದ. | Just'ly | ನ್ಯಾಯವಾಗಿ, ಸರಿಯಾಗಿ. |
| Di'li-gen-tly | ತತ್ಪರವಾಗಿ, ಆಸಕ್ತಿಯಿಂದ. | Sud'den-ly | ಅಕಸ್ಮಾತ್ತಾಗಿ, ಥಟ್ಟನೆ. |

1) Near ಎಂಬದು ವಿಶೇಷಣ ಸಹ ಆಗುತ್ತದೆ. ಆಗ ಅದರ ಮುಂದೆ ಚತುರ್ಥೀ ವಿಭಕ್ತಿ ಬರುತ್ತದೆ. ಹಾಗು ಆ ಚತುರ್ಥಿಯ ಹಿಂದಿನ to ಗುಪ್ತವಿರುತ್ತದೆ. ಉದಾ—My friend sits *near* me ನನ್ನ ಸ್ನೇಹಿತನು ನನ್ನ ಹತ್ತರ ಕೂತುಕೊಳ್ಳುತ್ತಾನೆ. like = ಸಮವಾದ, ಸಮಾನ, ಅಂಥ; unlike = ಅಸಮಾನ, ಭಿನ್ನ ಎಂಬ ವಿಶೇಷಣಗಳ ಮುಂದೆ ಬರುವ ಚತುರ್ಥಿಯ to ಗುಪ್ತವಿರುತ್ತದೆ.

| | | | |
|---|---|---|---|
| Per'fect-ly | ಸಂಪೂರ್ಣವಾಗಿ, ಪೂರಾ. | Strict'ly | ೧ ಬಿಗಿಯಾಗಿ, ೨ ಖಂಡಿತವಾಗಿ, ನಿಶ್ಚಿತರೀತಿಯಿಂದ, ಕಠೋರವಾಗಿ. |
| Great'ly | ಬಹಳವಾಗಿ. | To pro-nounce' | ಉಚ್ಚರಿಸು. |
| Gent'ly | ಸೌಮ್ಯವಾಗಿ, ಮೆಲ್ಲಗೆ, ನಮ್ರಭಾವದಿಂದ. | To sat'isf'y | ಸಮಾಧಾನ ಮಾಡು, ತೃಪ್ತಿಪಡಿಸು. |
| A word | ಶಬ್ದ, ಮಾತು. | To un'derstand' | ತಿಳಿ, ಗ್ರಹಿಸಿಕೊಳ್ಳು. |
| A sen'ten'ce | ವಾಕ್ಯ. | To alarm | ೧ ಬೆದರಿಸು; ೨ ಭಯಸೂಚಿಸಿ ಎಚ್ಚರಗೊಳಿಸು, ಎಬ್ಬಿಸು. |
| A cu'stom | ನಡತೆ, ರೀತಿ, ಪದ್ಧತಿ, ವಾಡಿಕೆ. | Bar'be-rous' | ಕಾಡ, ಕ್ರೂರ. |
| An or'nament | ಒಡವೆ, ಭೂಷಣ, ಆಭರಣ. | An ac'ci-dent | ಅಕಸ್ಮಾತ್ತಾಗಿ ಸಂಭವಿಸಿದ ಸಂಗತಿ, ಅಪಾಯ. ದೈವಯೋಗ. |
| Rent | ಬಾಡಿಗೆ. | Tax | ತೆರಿಗೆ, ಕಂದಾಯ. |
| Toll, duty | ಸುಂಕ, ಕರ. | Sur'name | ಅಡ್ಡಹೆಸರು, ಉಪನಾಮ. |

## ಭಾಷಾಂತರಪಾಠ ೧೪.

೮೧. 1. We pay our rent monthly. 2. I often write a letter to my cousin. 3. I seldom get an answer. 4. The lion's greatest ornament is his beautiful mane. 5. The birds are singing merrily. 6. We never had such an accident before. 7. This accident will greatly alarm his friends. 8. Most[1] people like horses. 9. What is like thee ?[2] 10. This accident is not unlike my dream. 11. This story is not unlike yours. 12. The house stands[3] near the river. 13. Will you come nearer ? 14. I now see him *more* frequently than before. 15. You write *more* correctly than most boys of your class. 16. You learn your lesson well. 17. John learns them *better*. 18. Which animal do you like *best ?* 19. Will you pronounce *more* distinctly that word again. 20. I will perfectly satisfy you. 21. You hardly understand the sentence. 22. We have many barbarous customs.

1) most ಎಂಬ ವಿಶೇಷಣದ ಹಿಂದೆ the ಎಂಬ ಉಪಪದವು ಅವಶ್ಯವಾಗಿ ಬೇಕಾಗುವದಿಲ್ಲ. 2) ಪುಟ ೨೭ ಟಿಪ್ಪಣಿ 2 ನೋಡು. 3) ಇಲ್ಲಿ stands ಎಂಬದರ ಭಾಷಾಂತರ 'ಅದೆ' ಎಂತ ಮಾಡಬೇಕು.

23. His daughter sings beautifully. 24. I will learn *more* deligently. 25. My parents will *most* willingly grant my request.

೧ ನಾವು ನಿಮಗೆ ಸಂತೋಷದಿಂದ ಸಹಾಯ ಮಾಡುವೆವು. ೨ ರೊಟ್ಟಿಯವನು ನಾಳಿಗೆ ಇದಕ್ಕೂ ಬೇಗ ಬರುವನು. ೩ ಚಿಗರಿಯು ಹೆಚ್ಚು ದೂರ ಹೋಗುತ್ತಿತ್ತು. ೪ ಅವನ ಓದೋಣ ಕೆಟ್ಟದು, ಬರೆಯೋಣ ಅದಕ್ಕೂ ಕೆಟ್ಟದು. ೫ ಎಲ್ಲರಿಗಿಂತ ಬೇಗ ಯಾರು ಹೋಗುವರು ? ೬ ನಾವು ಸಾಧಾರಣವಾಗಿ ದಿನಾಲು ಎರಡು ಪಾಠಗಳನ್ನು ಕಲಿಯುತ್ತೇವೆ. ೭ ಯಾವ ಹುಡುಗನು ತನ್ನ ಪಾಠಗಳನ್ನು ಚೆನ್ನಾಗಿ (ತಯಾರ) ಮಾಡುತ್ತಾನೆ ? ೮ ಕಾರಕೂನನು ಆ ಪತ್ರವನ್ನು ಬಹಳ ಜಾಗ್ರತೆಯಿಂದ ಬರೆಯುತ್ತಿದ್ದನು. ೯ ನೀನು ಯಾವಾಗಲೂ ಕೆಲಸದಲ್ಲಿರುತ್ತೀ. ೧೦ ನಮ್ಮ ಉಪ್ಪಾರನು ಈ ಕೆಲಸವನ್ನು ಇದಕ್ಕೂ ಬೇಗ ಮಾಡುವನು. ೧೧ ನಿನ್ನ ಅಕ್ಷರ[1] ಬಹಳ ಕೆಟ್ಟವು. ೧೨ ಅವನು ನನಗೆ ಈ ಪ್ರಶ್ನವನ್ನು ಪದೇ ಪದೇ ಕೇಳುತ್ತಿರುತ್ತಾನೆ. ೧೩ ಎಷ್ಟೋ ಜನರು ಮಾತಾಡುವದು ಬಹಳ, ಮಾಡುವದು ಸ್ವಲ್ಪ. ೧೪ ನೀನು ಬಹಳ ಆಲೋಚನೆ ಮಾಡುತ್ತೀ. ೧೫ ಈ ಹಣ್ಣುಗಳು ಬಹಳ ಸಿಹಿಯಾಗಿವೆ. ೧೬. ನಿಮ್ಮ ಹುಡುಗನು ಶುದ್ಧವಾಗಿ ಬರೆಯುತ್ತಾನೆ. ೧೭ ಅವನು ಯಾವಾಗಲೂ ಸತ್ಯ ಮಾತಾಡುತ್ತಾನೆ. ೧೮ ನೀನು ಅವನನ್ನು ಹೇಗೆ ತೃಪ್ತಿ ಪಡಿಸುವಿ ? ೧೯ ಅವನು ನಿನಗೆ ಎಂದಾದರೂ ಭೆಟ್ಟಿಯಾಗುತ್ತಾನೋ ? ೨೦ ಅವನು ಇದೇ ಈಗ ಇಲ್ಲಿ ಇದ್ದನು.

## ೧೫ ನೇ ಪಾಠ.

### ವಿಧ್ಯರ್ಥ.

### Imperative Mood.

೬೨. ಕ್ರಿಯಾಪದದ ಮೂಲರೂಪದಿಂದ ಎರಡೂ ವಚನಗಳಲ್ಲಿ ವಿಧ್ಯರ್ಥದ ಅರ್ಥವಾಗುತ್ತದೆ[2].

ಉದಾ :—Write ಬರೆ, ಅಥವಾ ಬರೆಯಿರಿ.

---

1) ಅಕ್ಷರ hand-writing.

2) ವಿಧ್ಯರ್ಥದಲ್ಲಿ ಸರ್ವನಾಮದ ಮೇಲೆ ವಿಶೇಷ ಜೋರ ಇದ್ದರೆ, ಅದನ್ನು ಅಧ್ಯಾಹಾರ ಮಾಡದೆ ಗಟ್ಟಿಯಾಗಿ ಉಚ್ಚರಿಸಬೇಕು. ಉದಾ—

*You write*
ಅಥವಾ *Do you write* } ನೀನೇ ಬರೆ.
*Do not you write* ನೀವು ಬರೆಯಬೇಕು.

ಇಲ್ಲಿ ದ್ವಿತೀಯ ಪುರುಷವು ಅಧ್ಯಾಹೃತವದೆ ಎಂದು ತಿಳಿದುಕೊಳ್ಳಬೇಕು.

ಅಪ್ಪಣೆಯ: ಅವಶ್ಯವಾದದ್ದಿದ್ದರೆ, do ಎಂಬ ಸಹಾಯಕ್ರಿಯಾಪದವನ್ನು ಪ್ರಯೋಗಿಸಿ ಅದನ್ನು ಗಟ್ಟಿಯಾಗಿ ಉಚ್ಚರಿಸಬೇಕು.

ಉದಾ: Do write ಬರೆ, ಬರೆ ಅಥವಾ ಬರೆಯಿರಿ, ಬರೆಯಿರಿ.

೮೩. ನಿಷೇಧಾರ್ಥದಲ್ಲಿ Do not write ಬರೆಯಬೇಡ ಎಂತ ಪ್ರಯೋಗವಾಗುತ್ತದೆ. ಇಲ್ಲಿ do ಎಂಬದು ಕೇವಲ ಸಹಾಯ ಕ್ರಿಯಾಪದವೇ ಹೊರ್ತು ಅದು ನಿಶ್ಚಯಾರ್ಥದಂತೆ ಅವಶ್ಯಕತೆಯನ್ನು[1] ತೋರಿಸುವದಿಲ್ಲ.

೮೪. To be, to have ಎಂಬ ಧಾತುಗಳ ವಿಧಿರೂಪಗಳು be, have.

ಇಂಗ್ಲಿಷ ಭಾಷೆಯೊಳಗಿನ ವಿಧ್ಯರ್ಥಕ ರೂಪಗಳು ಪ್ರಥಮ, ತೃತೀಯ ಪುರುಷಗಳಲ್ಲಿ ಇಲ್ಲ ಅವುಗಳಿಗೆ ಬದಲಾಗಿ ಮುಂದೆ ಬರೆದ ರೂಪಗಳನ್ನು ರೂಢಿಯಲ್ಲಿ ಪ್ರಯೋಗಿಸುವದು ಬಹಳ.

Let me write ನಾನು ಬರೆಯುವೆ (ನನಗೆ ಬರೆಯಗೊಡು)
Let us write ನಾವು ಬರೆಯೋಣ (ನಮಗೆ ಬರೆಯಗೊಡಿರಿ).
Let him, her, it write ಅವನು, ಅವಳು, ಅದು ಬರೆಯಲಿ.
Let them write ಅವರು, ಅವು ಬರೆಯಲಿ.

೮೫. ಪ್ರಶ್ನಾರ್ಥಕ ವಾಕ್ಯವನ್ನು ಒಮ್ಮೊಮ್ಮೆ ಬಿನ್ನಹ ಮಾಡಿಕೊಳ್ಳುವದಕ್ಕಾಗಲಿ, ಒಬ್ಬರಿಗೆ ಯಾವದಾದರೊಂದು ಕೆಲಸ ಮಾಡು ಎಂದು ಮರ್ಯಾದೆಯಿಂದ ಹೇಳುವದಕ್ಕಾಗಲಿ, ವಿಧ್ಯರ್ಥದಂತೆ ಪ್ರಯೋಗಿಸುವರು. ಉದಾ:

Will you read ? ಸ್ವಲ್ಪ ಓದುತ್ತೀಯಾ ? ಓದು ನೋಡೋಣ ?

---

1) ನಿಶ್ಚಯಾರ್ಥಕ ವಿಧ್ಯರ್ಥದಲ್ಲಿ do ಎಂಬ ಸಹಾಯ ಕ್ರಿಯಾಪದವು ಅವಶ್ಯಕತೆಯನ್ನು ತೋರಿಸುವಂತೆಯೇ ಅದನ್ನು ವರ್ತಮಾನ ಭೂತಕಾಲಗಳಲ್ಲಿ ಕ್ರಿಯೆಯ ಮೇಲೆ ಜೋರು ಕೊಡುವದಕ್ಕಾಗಿ ಉಪಯೋಗಿಸುತ್ತಾರೆ. ಉದಾ—I *do* write ನಾನು ಬರೆದೇ ಬರೆಯುತ್ತೇನೆ; I *did* write ನಾನು ನಿಶ್ಚಯವಾಗಿ ಬರೆದೆನು. ಆದರೆ ಪ್ರಶ್ನಾರ್ಥಕ ವಾಕ್ಯಗಳಲ್ಲಿಯೂ ಎಲ್ಲ ತರದ ನಿಷೇಧಾರ್ಥಕ ವಾಕ್ಯಗಳಲ್ಲಿಯೂ *do* ಎಂಬದು ಅರ್ಥವತ್ತಾಗುವದಿಲ್ಲ.

೮೬. ತನಗಿಂತ ಕಡಿಮೆ ಯೋಗ್ಯತೆಯುಳ್ಳ ಮನುಷ್ಯನಿಗೆ ಅಪ್ಪಣೆ ಮಾಡುವಾಗ ಮಾತಿನ ಕಠೋರತನವನ್ನು ಕಳೆದುಬಿಡುವದಕ್ಕಾಗಿ ವಿಧ್ಯರ್ಥದ ವಾಕ್ಯಗಳಲ್ಲಿಯೂ ಅದೇ ಅರ್ಥದ ಪ್ರಶ್ನಾರ್ಥಕ ವಾಕ್ಯಗಳಲ್ಲಿಯೂ please ಇಲ್ಲವೆ if you please ಎಂಬ ಶಬ್ದಗಳನ್ನು ಹಾಕುವ ರೂಢಿಯು ಸಭ್ಯವಾದ ಸಂಭಾಷಣದಲ್ಲಿ ಬಹಳ. ಉದಾ :—

**Please, hand me that pen-knife** ಆ ಚಾಕು ಅಷ್ಟು ಇತ್ತ ಕೊಡು.
**Bring me some water, if you please** ನನಗೆ ಒಂದಿಷ್ಟು ನೀರು ತಂದುಕೊಡು.
**Will you please, give me that book** ಆ ಪುಸ್ತಕವನ್ನು ನನಗೆ ಕೊಡುತ್ತೀರಾ?

## ೮೭ ಶಬ್ದಸಂಗ್ರಹ ೧೫.

| | | | |
|---|---|---|---|
| Thought<br>a thought | ಆಲೋಚನೆ,<br>ವಿಚಾರ. | The com'pany<br>Good company | ಸಹವಾಸ, ಸಂಗತಿ.<br>ಒಳ್ಳೇ ಸಂಗತಿ, ಸತ್ಸಂಗ. |
| An ap-pear'ance | ಮುದ್ರೆ,<br>ಸ್ವರೂಪ. | To defraud' | ಮೋಸಗೊಳಿಸು, ಮೋಸ<br>ಮಾಡು, ವಂಚಿಸು. |
| An ointment | ತೈಲ, ಮಲಮು. | To translate' | ಭಾಷಾಂತರ ಮಾಡು.<br>ತರ್ಜುಮೆ ಮಾಡು. |
| Patri-ot-ism | ಸ್ವದೇಶಾಭಿಮಾನ. | To explain | ಅರ್ಥ ಹೇಳು, ತಿಳಿಸಿ ಕೊಡು. |
| Si'lence | ಸುಮ್ಮನಿರುವದು,<br>ಮೌನ, ಶಾಂತತೆ. | To hon'our | ಸನ್ಮಾನಿಸು, ಗೌರವಿಸು,<br>ಮಾನಕೊಡು. |
| Sil'ent | ಸುಮ್ಮನಾದ. | To con-si'der | ಆಲೋಚಿಸು, ತಿಳಿದುನೋಡು. |
| Theft[1] | ಕಳುವು, ತುಡುಗು. | To a-void' | ತಪ್ಪಿಸು, ವರ್ಜಿಸು, ಜರಿ. |
| Robbery[1] | ಸುಲಿಗೆ, ಲೂಟಿ. | To en-cour'age | ಉತ್ತೇಜನ ಕೊಡು,<br>ಧೈರ್ಯಗೊಳಿಸು,<br>ಹುರಿದುಂಬಿಸು. |
| Aft'erwards | ತರುವಾಯ,<br>ಆಮೇಲೆ. | To com-mit' | ವಚನಬದ್ಧನಾಗು.<br>(ಕೆಟ್ಟ ಕೆಲಸ) ಮಾಡು. |
| To treat | ನಡಿಸು, ಗಣಿಸು. | Polite' | ಆದರಶೀಲ, ಸಭ್ಯ,<br>ಮರ್ಯಾದೆಯುಳ್ಳ. |

## ಭಾಷಾಂತರಪಾಠ ೧೫.

೮೮. 1. *Do* not steal. 2. *Do* not *tell* lies. 3. *Do* not *kill.* 4. *Do* not *defraud.* 5. *Honour* your father and mother. 6. *Remember* this well. 7. *Do* not *behave*

1) Theft ಅಂದರೆ ಗುಪ್ತ ರೀತಿಯಿಂದ ಕದಿಯೋಣ, Robbery ಅಂದರೆ ಜುಲುಮೆಯಿಂದ ಅಪಹಾರ ಮಾಡೋಣ, ಸುಲಿಗೆ ಮಾಡೋಣ, ಲೂಟಿ ಮಾಡೋಣ.

foolishly. 8. *Avoid* the company of wicked men. 9. He wants good company. 10. A good name is *very* precious. 11. *Let us help* our friends. 12. *Let us not encourage* flatterers. 13. Patriotism is one of the noblest virtues. 14. Shall I ever again see such holy men? 15. I shall never do so again. 16. *Let them not shut* the door so soon. 17. Why do you call him back so soon? 18. I do not want so much rice. 19. *Where* do you keep your books? 20 Why do you place your books here? 21. you *explain* this sentence to him. 22. *Be* silent. 23. *Consider* well. 24 *Treat* him kindly. 25. He has always a noble[1] appearance. 26. *What* are your thoughts? 27. Do *give* some bread to that poor man. 28. Do virtue and vice ever go together? 29. *Do* not *beat* the dog, it will bite you. 30 *Be* pious, and you will *be* happy. 31. *Please give* me some ointment.

೧ ಓದು. ೨ ನೀನೇ ಓದು. ೩ ನೀವೇ ಹೋಗಿರಿ. ೪ ಈ ಪುಸ್ತಕವನ್ನು ಅವನಿಗೆ ಕೊಡು. ೫ ನಿನ್ನ ಆಲೋಚನೆಯನ್ನು ನನಗೆ ಹೇಳು. ೬ ನಾಳೆ ಬರಬೇಡ. ೭ ತೀವ್ರವಾಗಿ ತಿರುಗಿ ಬಾ. ೮ ಬಾಗಿಲು ಇಕ್ಕು. ೯ ನಿಮ್ಮ ಪುಸ್ತಕಗಳನ್ನು ಮುಚ್ಚಿರಿ. ೧೦ ನಾವು ಅವನಿಗೆ ಇನಾಮು ಕೊಡೋಣ. ೧೧ ಅವನಿಗೆ ವೈದ್ಯನ ಮನೆ ತೋರಿಸು. ೧೨ ಕೆಳಗೆ ಕುಳಿತುಕೊಳ್ಳಿರಿ. ೧೩ ಮುಂದೆ ಬಾ. ೧೪ ರಾಮನನ್ನು ಇಲ್ಲಿಗೆ ಕಳುಹು. ೧೫ ನಾವು ಹೊರಗೆ ಹೋಗೋಣ. ೧೬ ದುಷ್ಟ ಜನರನ್ನು ಹೊಗಳಬೇಡಿರಿ. ೧೭ ನಾವು ಆ ಕೆಲಸವನ್ನು ಸಂತೋಷದಿಂದ ಮಾಡೋಣ. ೧೮ ಈ ಬಟ್ಟೆಗಳನ್ನು ಸೆಳೆ[2]. ೧೯ ನನಗೆ ಬೇಡ. ೨೦ ಹೀಗೋ? ೨೧ ಹೌದು, ಹಾಗೇ. ೨೨ ನನಗೆ ಹೀಗೆ ತೋರುತ್ತದೆ. ೨೩ ನೀನು ನಿನ್ನ ತಪ್ಪು ಮುಚ್ಚಿಕೊಳ್ಳಬೇಡ. ೨೪ ನನಗೆ ಮತ್ತಿಷ್ಟು ಮಸಿ ಕೊಡು. ೨೫ ಅವನನ್ನು ನಂಬಬೇಡ. ೨೬ ಹಾಲು ಕುಡಿ. ೨೭ ಅವನನ್ನು ಇಲ್ಲಿ ತಾ. ೨೮ ನೀನಾದರೂ ಅವನನ್ನು ಕರೆ. ೨೯ ನೀನು ನಿನ್ನ ಪುಸ್ತಕವನ್ನು ತೆರೆ. ೩೦ ಆ ಶಬ್ದವನ್ನು ತಿರುಗಿ ಉಚ್ಚರಿಸು. ೩೧ ನಾನು ನಿನಗೆ ಒಂದು ಮಾತು ಹೇಳುತ್ತೇನೆ[3]. ೩೨ ಸುಳ್ಳು ಮಾತಾಡಬೇಡ. ೩೩ ಈ ವಾಕ್ಯದ ಭಾಷಾಂತರ ಮಾಡು. ೩೪ ನನ್ನನ್ನು ಕ್ಷಮಿಸಿರಿ. ೩೫ ಮತ್ತಿಷ್ಟು ಸಮೀಪ ಬಾ.

1) Noble = ಸಭ್ಯ, ಗಂಭೀರ.
2) wash. 3) ಇಂಥಲ್ಲಿ ಇಂಗ್ಲಿಷದೊಳಗೆ ಭವಿಷ್ಯತ್ಕಾಲವನ್ನು ಹಾಕಬೇಕು.

# ೧೬ ನೇ ಪಾಠ.

## ಸಂಬೋಧನ.

## Vocative Case.

೮೯. ಪ್ರಥಮಾ ವಿಭಕ್ತಿಯನ್ನು ಸಂಬೋಧನದಂತೆ ಸಹ ಪ್ರಯೋಗಿಸುತ್ತಾರೆ. ಒಮ್ಮೊಮ್ಮೆ ಸಂಬೋಧನದ ಹಿಂದೆ O = ಏ ಎಂಬ ಸಂಬೋಧಕಾವ್ಯಯುವು ಬರುತ್ತದೆ. ಇಂಗ್ಲಿಷದಲ್ಲಿ ಸಂಬೋಧನ ವಿಭಕ್ತಿಯು ಕನ್ನಡದಂತೆ ವಾಕ್ಯದ ಆರಂಭದಲ್ಲಿ, ಮಧ್ಯದಲ್ಲಿ ಇಲ್ಲವೆ ಅಂತ್ಯದಲ್ಲಿ ಬರಬಹುದು. ಅದಕ್ಕೆ ಉಪಪದವು ಹತ್ತುವದಿಲ್ಲ.

### ೯೦ ಶಬ್ದಸಂಗ್ರಹ ೧೬.

| | | | |
|---|---|---|---|
| To bind | ಕಟ್ಟು. | Form'er | ೧ ಹಿಂದಿನ, ಪೂರ್ವಕಾಲದ; ೨ ಮೊದಲು ಹೇಳಿದ. |
| To re-peat' | ತಿರುಗಿ ಅನ್ನು. | In'do-lent | ಆಲಸ್ಯವುಳ್ಳ, ಸೋಮಾರಿಯಾದ. |
| A claim | ಹಕ್ಕು, ಬಾಧ್ಯತೆ. | Brav'er-y | ಶೌರ್ಯ, ಪರಾಕ್ರಮ. |
| To act | ಕೆಲಸ ಮಾಡು; ನಡೆ. | Va'lour | ಶೌರ್ಯ, ಪರಾಕ್ರಮ. |
| To for-sake' | ಕೈಬಿಡು, ಬಿಟ್ಟುಬಿಡು, ತ್ಯಜಿಸು. | Ab'surd' | ತಿಳಿಗೇಡಿತನದ, ಅಸಂಬದ್ಧ. |
| | | ಅಯ್ಯಾ, ರಾಯರೇ | sir[1]. |
| ಭಾಷಣ, ಮಾತು | a speech. | ಅಮ್ಮಾ, ಅವ್ವನವರೇ | madam[1]. |

### ಭಾಷಾಂತರಪಾಠ ೧೬.

೯೧. 1. Do not run away, *soldiers!* 2. Remember your former valour, *soldiers!* 3. Do not bind that man, *soldiers!* he is my friend. 4. You have no wisdom, *citizens!* 5 Hear me more attentively, *my friends!* 6. Do not do the absurd thing, *my son!* 7. You are indolent, *Rama!* 8. You are acting wisely, *Robert!* 9. How

1) ಸಂಬೋಧನ ವಿಭಕ್ತಿಯ ಹೊರ್ತು ಈ ಎರಡು ಶಬ್ದಗಳ ಪ್ರಯೋಗವು ಆಗುವದಿಲ್ಲ. Madam ಎಂಬ ಶಬ್ದವನ್ನು ಮದುವೆಯಾದ ಸ್ತ್ರೀಯರಿಗೆ ಮಾತ್ರ ಹಚ್ಚುತ್ತಾರೆ. ಮದುವೆಯಾಗದ ಸ್ತ್ರೀಯರಿಗೂ ಸಣ್ಣ ಹೆಣ್ಣು ಮಕ್ಕಳಿಗೂ miss, ಗಂಡು ಮಕ್ಕಳಿಗೆ master ಅನ್ನ ಬೇಕು.

many[1] are you, my good girl? 10. Do not forsake the unhappy monarch. 12 *Gopal*, do not repeat these words. 13. Kunti, was not Bhimsen's bravery praise-worthy? 14. Sir, please consider his claims. 15. Baburao, be always kind, polite and gentlemanly to all.

೧ ಎಲಾ ತಮ್ಮಾ, ಜಿನದತ್ತನ ಮಾತು ಕೇಳು. ೨ ರಾಮಾ, ನೀನು ಏನು ಮಾಡುತ್ತಿದ್ದೀ? ೩ ಆ ಮೇಲೆ ನೀನು ಎಲ್ಲಿಗೆ ಹೋಗುವಿ? ೪ ಗಣಪತೀ, ಈ ನೀರು ಬಿಸಿ ಅವೆ. ೫ ಅಪ್ಪಾ[2], ಗವಳಿಗನು ಹಾಲು ಎಲ್ಲಿಂದ ತರುತ್ತಾನೆ? ೬ ತುಳಸೀ, ಯಾಕೆ ಅಳುತ್ತೀಯೋ? ೭ ಮಕ್ಕಳಿರಾ, ಈ ಮಾತು ಚನ್ನಾಗಿ ನೆನಪಿನಲ್ಲಿಡಿರಿ. ೮ ಮಗುವೇ, ನಾನು ಯಾರು? ನನ್ನ ಹೆಸರೇನು? ೯ ಈ ಹಡಗು ಯಾರದು? ೧೦ ಗೆಳೆಯಾ, ನೀನು ನಿನ್ನೆ ಎಲ್ಲಿಗೆ ಹೋಗಿದ್ದಿ? ೧೧ ಆ ಬಡ ಪ್ರಾಣಿಯು ಗಂಡನು ಆಕೆಯ ಕೈಬಿಟ್ಟು ಹೋಗುತ್ತಿದ್ದನು. ೧೨ ಅಯ್ಯಾ, ನಾನು ಹೋಗಲಾ? ೧೩ ರಾಯರೇ, ನನಗೆ ಅಪ್ಪಣೆ ಕೊಡುತ್ತೀರಾ? ೧೪ ಅವ್ವನವರೇ[3], ತಮ್ಮದೇನು ಅಪ್ಪಣೆ? ೧೫ ನೀನು ಅವನಿಗೆ ಎಷ್ಟು ಕೊಡತಕ್ಕದ್ದು?

---

## ೧೭ ನೇ ಪಾಠ.

### ಭೂತಕಾಲದಲ್ಲಿ ಕ್ರಿಯಾಪದಗಳನ್ನು ನಡಿಸುವ ರೀತಿ.

### Conjugation of Verbs in the Past Tense.

೯೨ ಇಂಗ್ಲಿಷದಲ್ಲಿ ಕ್ರಿಯಾಪದಗಳನ್ನು ಭೂತಕಾಲದಲ್ಲಿ ನಡಿಸುವ ವಿಧಗಳು ಎರಡು; ಅವುಗಳಿಗೆ Weak Conjugation ಎಂತಲೂ Strong Conjugation ಎಂತಲೂ ಅನ್ನುತ್ತಾರೆ. ವರ್ತಮಾನಕಾಲಕ್ಕೆ *ed* ಪ್ರತ್ಯಯ ಹತ್ತಿ ಭೂತಕಾಲ, ಭೂತಕೃದ್ವಾಚಕಗಳಾಗುವ ಕ್ರಿಯಾಪದಗಳು ಮೊದಲನೇ ವಿಧದವು.

---

1) ಎಷ್ಟು ಮಂದಿ. 2) ಅಪ್ಪ papa. 3) ಅವ್ವ mamma.

 

ಉದಾ:—

| ವರ್ತಮಾನಕಾಲ. | ಭೂತಕಾಲ. | ಭೂತಕೃದ್ವಾಚಕ. |
|---|---|---|
| Melt | Melt*ed*[1] | Melt*ed*. |

ಇಂಗ್ಲಿಷದಲ್ಲಿ ಒಟ್ಟಿಗೆ ಸುಮಾರು ೪೦೦೦ ಕ್ರಿಯಾಪದಗಳುಂಟು. ಅವುಗಳಲ್ಲಿ ಈ ತರದವೇ ಬಹಳ.

೮೩. *ed* ಎಂಬ ಪ್ರತ್ಯಯವನ್ನು ಹಚ್ಚುವಾಗ ೧ ನೇ ಪುಸ್ತಕದೊಳಗಿನ ೫ ನೇ, ೬ ನೇ, ೭ ನೇ, ೮ ನೇ ಕಲಮುಗಳಲ್ಲಿ ಹೇಳಿದ ನಿಯಮಗಳನ್ನು ಅನುಸರಿಸಬೇಕು. ಉದಾ:—

| ವರ್ತಮಾನಕಾಲ. | ಭೂತಕಾಲ. | ಭೂತಕೃದ್ವಾಚಕ. |
|---|---|---|
| Nod | nod*ded* | nod*ded*. |
| Permit | Permit*ted* | permit*ted*. |
| Cry | cri*ed* | cri*ed*. |
| Hate | hat*ed* | hat*ed*. |

೮೪ Weak conjugation ದ ಕ್ರಿಯಾಪದಗಳನ್ನು ಭೂತಕಾಲದಲ್ಲಿ ಹೇಗೆ ನಡಿಸಬೇಕೆಂಬುದನ್ನು ಕೆಳಗೆ ಬರೆದ ಉದಾಹರಣದಿಂದ ತಿಳಿದುಕೊಳ್ಳಬೇಕು.

To learn ಎಂಬ ಕ್ರಿಯಾಪದದ ಭೂತಕಾಲ.

| | ಏಕವಚನ. | ಬಹುವಚನ. |
|---|---|---|
| 1 | I learn*ed* | We learn*ed*. |
| 2 | Thou learn*edst* | You learn*ed*. |
| 3 | He, She, It learn*ed* | They learn*ed*. |

---

1) ಕ್ರಿಯಾಪದದ ಅಂತ್ಯದ ಉಚ್ಚಾರವು ಕ್, ಶ್, ಪ್, ಸ್, ಚ್ ಅಥವಾ ಫ್ (*f*) ಆಗುತ್ತಿದ್ದರೆ, *ed* ಎಂಬದನ್ನು ಟ್ ದಂತೆ ಉಚ್ಚರಿಸಬೇಕು. ಹೇಗಂದರೆ-to crush ನಚ್ಚು ಗುಚ್ಚು ಮಾಡು; crush*ed;* to tax ತೆರಿಗೆ ಕಟ್ಟು, tax*ed*. ಕ್ರಿಯಾಪದದ ಕೊನೆಯ ಉಚ್ಚಾರವು ಟ್ ಅಥವಾ ಡ್ ಆಗುತ್ತಿದ್ದರೆ, *ed* ಪ್ರತ್ಯಯದ ಉಚ್ಚಾರವು ಎಡ್ ಆಗುತ್ತದೆ. ಉದಾ...To rest ವಿಶ್ರಮಿಸು, rest*ed;* to hate ಅಸಹ್ಯಪಡು, hat*ed;* to fade ಬಾಡು, fad*ed;* ಬೇರೆ ಕಡೆಯಲ್ಲಿ *ed* ದ ಉಚ್ಚಾರವು ಡ್ ಆಗುತ್ತದೆ. ಉದಾ—To fear, fear*ed;* to play, play*ed;* to cry, cri*ed;* to love, lov*ed.*

ಭೂತಕಾಲದಲ್ಲಿ *ed* ಪ್ರತ್ಯಯ ಹತ್ತಿದ ಕ್ರಿಯಾಪದಗಳಿಗೆ ದ್ವಿತೀಯ ಪುರುಷ ಏಕವಚನದಲ್ಲಿ *st* ಎಂಬ ಪ್ರತ್ಯಯವು ಹತ್ತುತ್ತದೆ, *est* ಹತ್ತುವದಿಲ್ಲ.

೯೫ ಭೂತಕಾಲವನ್ನು ಹೋದ ಕಾಲದಲ್ಲಿ ನಡೆಯುತ್ತಿದ್ದ ನಿತ್ಯ ಕ್ರಿಯೆಯನ್ನು ತೋರಿಸುವದಕ್ಕೆ ಪ್ರಯೋಗಿಸುವರು. ಹೇಗಂದರೆ:—

He learn*ed* ಅವನು ಕಲಿತನು, ಅಥವಾ ಅವನು ಕಲಿಯುತ್ತಿದ್ದನು.

೯೬ ನಿಷೇಧಾರ್ಥಕ ವಾಕ್ಯಗಳಲ್ಲಿಯೂ ಪ್ರಶ್ನಾರ್ಥಕ ವಾಕ್ಯಗಳಲ್ಲಿಯೂ do ಎಂಬ ಸಹಾಯ ಕ್ರಿಯಾಪಧದ ಭೂತಕಾಲವಾದ did ಎಂಬದನ್ನು ಪ್ರಯೋಗಿಸಿ ಮುಖ್ಯ ಕ್ರಿಯಾಪದದ ಮೂಲ ರೂಪವನ್ನೇ ಇಡಬೇಕು. ಉದಾ:—

He *did* not *learn* ಅವನು ಕಲಿಯಲಿಲ್ಲ.

*Did* he *learn?* ಅವನು ಕಲಿತನೋ ?

೯೭ ಕನ್ನಡದಲ್ಲಿ ಒಮ್ಮೊಮ್ಮೆ ಭೂತಕಾಲದ ಅರ್ಥವಿರಲಾಗಿ ಭವಿಷ್ಯತ್ ಕಾಲದ ರೂಪವನ್ನು ಪ್ರಯೋಗಿಸುವರು; ಇಂಥಲ್ಲಿ ಇಂಗ್ಲಿಷದೊಳಗೆ ಭೂತಕಾಲವನ್ನೇ ಉಪಯೋಗಿಸಬೇಕು. ಉದಾ:—

ಕಾಶಿಯಲ್ಲಿ ಒಬ್ಬ ವಿದ್ವಾಂಸನು ಇರುವನು. A certain learned man lived in Benares.

### ೯೮ ಶಬ್ದಸಂಗ್ರಹ ೧೭.

| | | | |
|---|---|---|---|
| To discov'er[1] | ಶೋಧಿಸಿ ತೆಗೆ, ಕಂಡು ಹಿಡಿ, ಗೊತ್ತು ಹಚ್ಚು. | To visit | ಭೆಟ್ಟಿಯಾಗು, ಕಾಣು. |
| To in'vent | ಹುಟ್ಟಿಸು, ಕಲ್ಪಿಸು. | At first | ಮೊದಲು. |
| To co'py | ನಕಲು ಬರೆ-ಮಾಡು. | At last | ಕಟ್ಟಕಡೆಗೆ, ಕೊನೆಗೆ. |
| To ru'in | ನಾಶಪಡಿಸು, ಹಾಳು ಮಾಡು. | To dis-turb' | ತೊಂದರೆಕೊಡು, ಗಲಿಬಿಲಿ ಮಾಡು, ಅಡ್ಡೀ ಮಾಡು. |
| To de-cline | ಬೇಡೆಂದು ಹೇಳು, ಒಲ್ಲೆನ್ನು. | Print'ing | ಛಾಪಿಸೋಣ. |
| To con-fess | ಒಪ್ಪಿಕೊಳ್ಳು. | An art | ಕಲೆ, ವಿದ್ಯೆ. |

1) To discover – ಇದ್ದ ವಸ್ತುವನ್ನು ಹುಡುಕಿ ತೆಗೆ, ಬಹಿರಂಗಕ್ಕೆ ತಾ. To invent ಇಲ್ಲದ್ದನ್ನು ಹುಟ್ಟಿಸು. ಯಾವದೊಂದು ಹೊಸ ಯುಕ್ತಿ ತೆಗೆ.

| | | | |
|---|---|---|---|
| To rec'og-nize | ಗುರುತು ಹಿಡಿ. | A plan'tain | ಬಾಳೆಯ ಹಣ್ಣು. |
| To aston'ish | ಆಶ್ಚರ್ಯಪಡಿಸು. | Gun'powder | ಮದ್ದು. |
| To con'tra-dict | ಅಲ್ಲನ್ನು. ಮೊದಲು ಹೇಳಿದ್ದಕ್ಕೆ ವಿರುದ್ಧ ಮಾತಾಡು, ಪ್ರತಿಯಾಗಿ ಹೇಳು. | A bul'let, a ball | ಗುಂಡು. |
| | | An en'emy | ಹಗೆ, ಶತ್ರು. |
| To wrong | ಅನ್ಯಾಯ ಮಾಡು. | | |
| To waste | ಹಾಳು ಮಾಡು, ಸುಮ್ಮನೆ ಖರ್ಚು ಮಾಡು, ನಷ್ಟ ಮಾಡು. | A steam-en'gine | ಉಗಿಯ ಯಂತ್ರ. |
| To fin'ish | ತೀರಿಸು, ಮುಗಿಸು, ಕೊನೆಗಾಣಿಸು. | A pri'son-er | ಸೆರೆಯಾಳು, ಖೈದಿ. |
| Al'togeth'er | ಪೂರಾ, ಒಟ್ಟಿಗೆ, ಕೇವಲ. | An offer | ಕೊಡಲಿಕ್ಕೆ ಬರೋಣ, (ಮಾನ್ಯ ಇಲ್ಲವೆ ಅಮಾನ್ಯ ಮಾಡುವದಕ್ಕಾಗಿ) ಮುಂದಿಟ್ಟ ವಸ್ತು,— ಮಾತು,— ಆಲೋಚನೆ. |
| Foul | ೧ ಹೊಲಸು, ೨ ಕೆಟ್ಟ. | | |
| Flat'ly | ಸ್ಪಷ್ಟವಾಗಿ, ಖಂಡಿತವಾಗಿ. | At once | ಕೂಡಲೇ, ಒಮ್ಮೆಲೆ. |
| ಅರ್ಥ | the meaning. | ನೊಂದಿಸು | to ex-tin'guish, to put out. |
| ನಾಯಕ, ಮುಖ್ಯಸ್ಥ, ಮುಖಂಡ | A leader. | ಮಿಠಾಯಿ | Sweet'meats. |

## ಭಾಷಾಂತರಪಾಠ ೧೭.

೯೯ 1 He visit*ed* me and I visit*ed* him almost daily. 2 We generally work*ed* and play*ed* together. 3 The poor workman ruin*ed* himself. 4 The prisoner confess*ed* his crime at last. 5 We recogniz*ed* him at once. 6 I finish*ed* my work at last. 7 The captain *did* not like him at first. 8 Columbus discovered America. 9 Gutenberg invent*ed* the art of printing. 10 Who invent*ed* the steam engine? 11 I *did* not write a letter to my aunt yesterday. 12 Why *did* you disturb the officer? 13 I copi*ed* my letter again. 14 I declin*ed* his offer. 15 I *did* not suspect you. 16 Love your enemies. 17 The news of the accident astonish*ed* him greatly. 18 I

offered him some plantains. 19 He *owed* a large sum of money to the lawyer. 20 You wrong me[1]. 21 The young man contradicted him flatly. 22 He was altogether wrong. 23 He *did* not satisfy me. 24 Why *did* you waste so much money ? 25 The soldiers *wasted* much gunpowder and many bullets.

೧ ನಾನು ಅವರಿಗೆ ಆಗಾಗ್ಗೆ ಭೆಟ್ಟಿಯಾಗುತ್ತಿದ್ದೆನು. ೨ ನಾರಾಯಣನೂ, ಗೋವಿಂದನೂ ಬಹುತರವಾಗಿ ಕೂಡಿ ಆಡುತ್ತಿದ್ದರು. ೩ ನಾನು ಅವನಿಗೆ ತೊಂದರೆ ಕೊಡಲಿಲ್ಲ. ೪ ಆ ಕೂಸಿನ ಮೇಲೆ ನನ್ನ ಪ್ರೀತಿ ಬಹಳ ಇತ್ತು. ೫ ನೀನು ನನಗೆ ಬಹಳ ಹೆದರುತ್ತಿದ್ದಿ. ೬ ಅವನು ನನಗೆ ತನ್ನ ಹೊಸ ಬಟ್ಟೆಗಳನ್ನು ತೋರಿಸಿದನು. ೭ ಅವನು ತನ್ನ ತಪ್ಪು ಒಪ್ಪಿಕೊಂಡನು. ೮ ನಾನು ಅವನ ಗುರುತು ಹಿಡಿಯಲಿಲ್ಲ. ೯ ಅವನು ನನ್ನ ಮೇಲೆ ಸಂಶಯ ಇಟ್ಟನು. ೧೦ ನ್ಯಾಯಾಧೀಶನು ಅವನನ್ನು ಕ್ಷಮಿಸಿದನು. ೧೧ ಆ ಜನರು ಸಂಗಡಲೇ ಅವರನ್ನು ಹೋಲಿಸಿದರು. ೧೨ ಹುಡುಗರು ತಮ್ಮ ಪಾಠಗಳನ್ನು ಮುಗಿಸಿದರು. ೧೩ ಸೇವಕನು ದೀವಿಗೆ ನೊಂದಿಸಿದನು. ೧೪ ಸಿಪಾಯಿಗಳು ಶತ್ರುಗಳ ಮುಖ್ಯಸ್ಥನಿಗೆ ಗಾಯ ಮಾಡಿದರು. ೧೫ ಅವನು ಪೋಷಾಕು ಹಾಕಿಕೊಂಡನು[2]. ೧೬ ಈ ವಾಕ್ಯದ ಅರ್ಥವನ್ನು ಹೇಳು[3]. ೧೭ ಹುಡುಗರು ಶಬ್ದಗಳನ್ನು ಚನ್ನಾಗಿ ಉಚ್ಚರಿಸಲಿಲ್ಲ. ೧೮ ನಮ್ಮ ಶಿಕ್ಷಕನು ನಮಗೆ ಬಹಳ ಉತ್ತೇಜನ ಕೊಟ್ಟನು. ೧೯. ಅವನು ಕೆಟ್ಟ ರೀತಿಯಿಂದ ನಡೆಯುತ್ತಿದ್ದನು. ೨೦ ಅವನು ಯಾವಾಗಲೂ ನನ್ನನ್ನು ತಪ್ಪಿಸುತ್ತಿದ್ದನು. ೨೧ ಗುರುಗಳು ಹುಡುಗರಿಗೆ ವಾಕ್ಯದ ಅರ್ಥವನ್ನು ತಿಳಿಸಿ ಹೇಳಿದರು. ೨೨ ನಮ್ಮ ಸೇವಕನು ನಿಮ್ಮ (ಹಣದ) ಚೀಲಕ್ಕೆ ಕೈ ಹಚ್ಚಲಿಲ್ಲ. ೨೩ ನಾವು ಅವನ ಉಪಕಾರ ಬಹಳ ನೆನಿಸಿದೆವು. ೨೪ ನಾನು ಅವನಿಗೆ ಹೀಗೆ ಹೇಳಿದೆನು. ೨೫ ಅವನು ಹಣವನ್ನು ಸುಮ್ಮನೆ ಖರ್ಚು ಮಾಡಿದನು.

---

ನೀವು ನನ್ನ ಮೇಲೆ ಅನ್ಯಾಯ ಮಾಡುತ್ತೀರಿ.

He dressed himself.

೩ Give (me) the meaning of this sentence. ಇಲ್ಲಿ to tell ಎಂಬ ಕ್ರಿಯಾಪದವನ್ನು ಉಪಯೋಗಿಸಿದರೆ, ಅದರ ಮುಂದೆ ಚತುರ್ಥೀ ವಿಭಕ್ತಿಯು ( me, him, etc. ) ಅವಶ್ಯ ಬೇಕು. ಹೇಗಂದರೆ—Tell me the meaning of this sentence ಈ ನಿಯಮಕ್ಕೆ to tell the truth, to tell a story ಮುಂತಾದವುಗಳು ಅಪವಾದಗಳು

## ೧೮ ನೇ ಪಾಠ.

## Strong Conjugation.

೧೦೦ ಯಾವ ಕ್ರಿಯಾಪದಗಳ ಭೂತಕಾಲ, ಭೂತಕೃದ್ವಾಚಕಗಳು *ed* ಪ್ರತ್ಯಯ ಹತ್ತದೆ ಮೂಲ ಶಬ್ದಗಳಲ್ಲಿಯೇ ರೂಪಾಂತರ ಹೊಂದಿ ಆಗುತ್ತವೆಯೋ ಅವು Strong Conjugation ದ ಕ್ರಿಯಾಪದಗಳೆಂದು ತಿಳಿದುಕೊಳ್ಳಬೇಕು. ಉದಾ:—

| ವರ್ತಮಾನ. | ಭೂತ. | ಭೂತಕೃದ್ವಾಚಕ. |
|---|---|---|
| *Do* | *did* | *done* |

ಇಂಗ್ಲಿಷದಲ್ಲಿ ಇಂಥಾ ಕ್ರಿಯಾಪದಗಳು ಸುಮಾರು ಇನ್ನೂರು ಉಂಟು. ಅವುಗಳಲ್ಲಿ ಒಂದೇ ಅವಯವವುಳ್ಳವು ಬಹಳ; ಮತ್ತು ಎರಡು ಅವಯವಗಳುಳ್ಳ ಕೆಲವು ಕ್ರಿಯಾಪದಗಳು ಒಂದು ಅವಯವದ ಕ್ರಿಯಾಪದಗಳಿಗೆ ಉಪಸರ್ಗಗಳು ಹತ್ತಿ ಆಗಿರುತ್ತವೆ. ಉದಾ:—

| ವರ್ತಮಾನ. | ಭೂತ. | ಭೂತಕೃದ್ವಾಚಕ. |
|---|---|---|
| Give | gave | giv en. |
| For-give | for-gave | for-given. |

೧೦೧ ಕ್ರಿಯಾಪದಗಳನ್ನು ಭೂತಕಾಲದಲ್ಲಿ ನಡಿಸಲಿಕ್ಕೆ ಬರುವ ಹಾಗೆ ಇವುಗಳ ಭೂತಕಾಲದ ಸಾಧಾರಣವಾದ ರೂಪಗಳನ್ನು ಬಾಯಿಪಾಠವೇ ಮಾಡಬೇಕು. ಎಂದರೆ ಏನೂ ತೊಂದರೆಯಾಗದು. ಭೂತಕಾಲದ ರೂಪದ ಅಂತ್ಯಾಕ್ಷರವು *e* ಇದ್ದರೆ, ದ್ವಿತೀಯ ಪುರುಷದ ಏಕವಚನದಲ್ಲಿ *st* ಎಂಬ ಪ್ರತ್ಯಯವನ್ನೂ, ಇರದಿದ್ದರೆ, *est* ಎಂಬ ಪ್ರತ್ಯಯವನ್ನೂ ಹಚ್ಚಬೇಕು; ಮತ್ತು ವರ್ತಮಾನಕಾಲದಲ್ಲಿ ಈ ಪ್ರತ್ಯಯವನ್ನು ಹಚ್ಚುವಾಗ ಮಾಡತಕ್ಕ ಹೆಚ್ಚು ಕಡಿಮೆಗಳನ್ನೆಲ್ಲ ಭೂತಕಾಲದಲ್ಲಿ ಸಹ ಮಾಡಬೇಕು. ಉದಾ:—

| ವರ್ತಮಾನ. | ಭೂತ. | ದ್ವಿ. ಪು. ಏ. ವ. |
|---|---|---|
| Write | wrote | wrot*est*. |
| Run | ran | rann*est*. |
| Be-get' (ಹುಟ್ಟಿಸು, ಹಡಿ) | be-got' | be-gott'*est*. |

☞ Did, was, had ಎಂಬವುಗಳ ದ್ವಿತೀಯ ಪುರುಷದ ಏಕವಚನಗಳು ನಿಯಮಕ್ಕೆ ವಿರೋಧವಾಗಿ did*st*, wa*st*, had*st* ಆಗುತ್ತವೆ.

☞ Strong Conjugation ದ ಕ್ರಿಯಾಪದಗಳಲ್ಲಿ ಮುಖ್ಯವಾದವು ಕೆಳಗೆ ಬರೆದವೆ.—

| ವರ್ತಮಾನಕಾಲ | ಭೂತಕಾಲ | ಭೂತಕೃದ್ವಾಚಕ. |
|---|---|---|
| Go | went | gone. |
| Sit | sat | sat. |
| Run | ran | run. |
| Come | came | come. |
| Stand | stood | stood. |
| Fall | fell | fal'len. |
| Hear | heard | heard. |
| Sleep | slept | slept. |
| Teach | taught | taught. |
| Sing | sang | sung. |
| Dig | dug | dug. |
| Spit ಉಗುಳು | spat, spit | spit. |
| See | saw | seen. |
| Take | took | taken. |
| Buy | bought | bought. |
| Sell | sold | sold. |
| Fly[1] ಹಾರು | flew | flown. |
| Flee ಓಡು | fled | fled. |
| Read | read | read. |
| Write | wrote | writ'ten. |

1) To fly ಎಂಬ ಕ್ರಿಯಾಪದದ ಅರ್ಥವು ಒಮ್ಮೊಮ್ಮೆ 'ಓಡು' ಎಂತ ಸಹ ಆಗುತ್ತದೆ.

| ವರ್ತಮಾನಕಾಲ. | ಭೂತಕಾಲ. | ಭೂತಕೃದ್ವಾಚಕ. |
|---|---|---|
| Beat | beat | beat'en, beat. |
| Do | did | done. |
| Catch | caught | caught. |
| Swim | swam | swum. |
| Sink | sank | sunk. |
| Kneel ಮೊಣಕಾಲೂರು | knelt | knelt. |
| Shine | shone | shone. |
| Throw | threw | thrown. |
| Bring | brought | brought. |
| Drink | drank | drunk. |
| Grow | grew | grown. |
| Shut | shut | shut. |
| Fight | fought | fought. |
| Lie ಬೀಳು | lay | lain, |
| Lay ಇಡು | laid | laid. |
| Speak | spoke | spoken. |
| Send | sent | sent. |
| Lend | lent | lent. |
| Build | built | built, |
| Hide | hid | hid. |
| Know | knew | known. |
| Show, shew | showed, shewed | shown, shewn. |
| Be | was | been. |
| Eat | ate | eaten. |
| Cut | cut | cut. |
| Think | thought | thought. |

| ವರ್ತಮಾನಕಾಲ. | ಭೂತಕಾಲ. | ಭೂತಕೃದ್ವಾಚಕ. |
|---|---|---|
| Have | had | had |
| Make | made | made |
| Sweep | swept | swept |
| Spin | spun | spun |
| Break | broke | broken |
| Be-come | be-came | be-come |
| Weep | wept | wept |
| Swear | swore | sworn |
| Spend | spent | spent |
| Hurt | hurt | hurt |
| Tear | tore | torn |
| Drive | drove | drive'n |
| Creep | crept | crept |
| Blow | blew | blown |
| Win | won | won |
| Lose | lost | lost |
| Shake | shook | shaken |
| Get | got | got'ten, got |
| Burn | burnt, burned | burnt, burned |
| Rise[1] | rose[1] | ris'en[1] |
| Set | set | set |
| Say | said | said |
| Tell | told | told |
| Give | gave | giv'en |
| Cost | cost | cost |
| For-give' | for-gave | for-given |
| Bite | bit | bit'ten, bit |

1) ಇಲ್ಲಿ...

| ವರ್ತಮಾನಕಾಲ. | ಭೂತಕಾಲ. | ಭೂತಕೃದ್ವಾಚಕ. |
|---|---|---|
| Feel | felt | felt |
| Find | found | found |
| Sow | sowed | sown |
| Mow | mowed | mown |
| Pay | paid | paid |
| Saw | sawed | sawed, sawn |
| Put | put | put |
| Steal | stole | stol'en |
| Weave | wove | wov'en |
| Bind | bound | bound |
| Ring (ಗಂಟೆ) ಬಾರಿಸು, ಗಣಗಣಿಸು | rang | rung |
| Ride { ಕುದುರೆಯ ಮೇಲೆ, ರಥದಲ್ಲಿ, ಕಾಲುಗಾಡಿಯ ಮೇಲೆ ಕೂತುಕೊಂಡು ಹೋಗು. | rode | rid'den |
| Spill ೧ ಚೆಲ್ಲು; ೨ ಸೂಸು | spilt | spilt |
| Sting (ಕೊಂಡಿಯಿಂದ) ಕಚ್ಚು, ದಂಶಮಾಡು | stung | stung |
| Swell ೧ ಉಬ್ಬು; ೨ ಬಾಯು | swelled | swol'len |
| Wear ೧ ಧರಿಸು; ೨ ಸವಿಸು | wore | worn |
| Arise' { ೧ ಏರು; ೨ ಉದಯವಾಗು; ೩ (ಮಲಗಿ) ಏಳು | a-rose' | a-risen |
| A-wake ೧ ಎಚ್ಚರವಾಗು; ೨ ಎಚ್ಚರ ಮಾಡು | a-woke | a-wak'ed |
| Bear ಹಡೆ, ಹೆರು | bore | born[1] |
| Bear ೧ ಹೊರು; ೨ ಸೈರಿಸು, ತಾಳು | bore | borne |
| Be-gin ಆರಂಭಿಸು | be-gan | be-gun |

1) Born ಹುಟ್ಟಿದ, ಎಂಬದು ಭೂತಕೃದ್ವಾಚಕ ವಿಶೇಷಣವು. ಇದು ಕ್ರಿಯಾಪದದ ಮುಂದೆ ಬರುತ್ತದೆ. ಉದಾ—It is *born* ಅದು ಹುಟ್ಟಿ ಅದೆ. ಅನ್ಯ ಕೃದ್ವಾಚಕಗಳಂತೆ ಇದರಿಂದ to bear ಎಂಬ ಕ್ರಿಯಾಪದದ ಪೂರ್ಣವರ್ತಮಾನ, ಪೂರ್ಣಭೂತ ಮುಂತಾದ ಕಾಲಗಳನ್ನು ಸಾಧಿಸಲಾಗದು. ಅಂಥ ಕಾಲಗಳು ಬೇಕಾದರೆ to bring forth, To give birth to [illegible] ಕ್ರಿಯಾಪದಗಳನ್ನು ಪ್ರಯೋಗಿಸಬೇಕು.

| ವರ್ತಮಾನಕಾಲ. | | ಭೂತಕಾಲ, | ಭೂತಕೃದ್ವಾಚಕ. |
|---|---|---|---|
| Be-hold' | ನೋಡು | be-held | be-held' |
| Bend | ೧ ಬಾಗು; ೨ ಬಾಗಿಸು | bent | bent |
| Be-seech | ಸೆರಗೊಡ್ಡಿ ಬೇಡಿಕೊ | be-sought' | be-sought' |
| Chide | ಜಬರಿಸು, ಗದರಿಸು, ಗುಲ್ಲು ಮಾಡು, ಸಿಟ್ಟು— | chid | chid'den |
| Choose | ಆರಿಸಿಕೊಳ್ಳು | chose | chos'en |
| Clothe | ತೊಡಿಸು, ಅರಿವೆ ಹಾಕು | cloth'ed, clad | cloth'ed, clad |
| Crow | (ಕೋಳಿ) ಕೂಗು | crowed, crew, | crow'ed |
| Draw | ಜಗ್ಗು, ಎಳೆ | drew | drawn |
| Dream | ೧ ಕನಸು ಬೀಳು; ೨ ಕನಸಿನಲ್ಲಿ ಕಾಣು | dreamt | dreamt |
| Dwell | ಇರು, ವಾಸ ಮಾಡು | dwelt | dwelt |
| Feed | ಹೊಟ್ಟೆಗೆ ಹಾಕು, ಮೇಯಿಸು | fed | fed |
| Spread | ೧ ಹಾಸು, ಹರವು; ೨ ಹಬ್ಬು | spread | spread |
| Flung | ಒಗೆ, ಬಿಸಾಡು | flung | flung |
| For-sake | ಕೈಬಿಡು, ತ್ಯಜಿಸು | for-sook | for-sak'en |
| Freeze | ಗಟ್ಟಿಯಾಗು, ಹೆಪ್ಪುಗಟ್ಟು, ಹೆರೆ | froze | froz'en |
| Gild | ಮುಲಾಮು ಮಾಡು, ಬಂಗಾರದ ನೀರು ಕೊಡು | gilt | gilt |
| Grind | ಬೀಸು | ground | ground |
| Hang | ೧ ತೂಗು ಹಾಕು; ೨ ತೂಗಾಡು | hung | hung |
| Hang[1] | ಗಲ್ಲಿಗೆ ಹಾಕು | hanged | hanged |
| Hold | ೧ ಹಿಡಿ; ೨ ಹಿಡಿಸು | held | held |
| Keep | ೧ ಇಡು; ೨ ಕಾಯು; ೩ ಸಾಕು | kept | kept |
| Lead | ದಾರಿ ತೋರಿಸು, ಕೈ ಹಿಡಕೊಂಡು ಹೋಗು, ಒಯ್ಯು | led | led |
| Leave | ಬಿಡು | left | left |
| Thrust | ೧ ದೂಡು; ೨ ಜಡಿ; ೩ ತುರುಕು, ೩೩ | thrust | thrust |

1) ಇದು Weak Conjugation ದ ಕ್ರಿಯಾಪದ.

| ವರ್ತಮಾನಕಾಲ. | | ಭೂತಕಾಲ. | ಭೂತಕೃದ್ವಾಚಕ. |
|---|---|---|---|
| Mean | ೧ ಉದ್ದೇಶಿಸು, ಮನಸಿನಲ್ಲಿರು; ೨ ಅರ್ಥವಾಗು | meant | meant |
| Meet | ೧ ಭೆಟ್ಟಿಯಾಗು; ೨ ಕೂಡು | met | met |
| Seek | ಅರಿಸು, ಹುಡುಕು | sought | sought |
| Shear | ಕತ್ತರಿಸು | sheared | shorn |
| Shoe | ನಾಲುಕಟ್ಟು | shod | shod |
| Shoot | ಗುಂಡು ಹಾಕಿ ಹೊಡೆ, ಎಸೆ | shot | shot |
| Wring | ೧ ಹಿಂಡು; ೨ ಒಡಮುರಿ | wrung | wrung |
| Wind | ೧ ಊದು; ೨ ತಿರುವು, ಕೀಲೀ ಕೊಡು[1]; ೩ ಸುತ್ತು | wound | wound |

## ೧೦೩. ಶಬ್ದಸಂಗ್ರಹ ೧೮.

| | | | |
|---|---|---|---|
| A lamb | ಕುರಿಮರಿ. | A bow | ವಂದನೆ. |
| An in'sect | ಹುಳ, ಕ್ರಿಮಿ. | To de-ceive | ಮೋಸಗೊಳಿಸು. ಮಾಡು, ವಂಚಿಸು |
| An auc-tion-eer' | ಲಿಲಾವುಗಾರ. | To o-mit | ಬಿಟ್ಟು ಬಿಡು, ಮಾಡದೆ ಇರು. |
| Present | ಕಾಣಿಕೆ, ಸಂಭಾವನೆ. | Fear'ful | ಭಯಂಕರವಾದ. |
| A fork[2] | ಮುಳ್ಳು. | Flat[4] | ಸಪಾಟ, ಸಮನಾದ. |
| Last night | ನಿನ್ನೆ ರಾತ್ರಿ. | Slow ly | ಮೆಲ್ಲಗೆ, ಸಾವಕಾಶ. |
| To-night | ಈವೊತ್ತು ರಾತ್ರಿ. | Sev'eral | ಹಲವು, ಅನೇಕ. |
| Al'so | ಕೂಡ, ಸಹ. | Away' | ದೂರ. |
| Other[3] | (ಅದರ) ಬೇರೊಂದು, ಇನ್ನೊಂದು. | A pot | ಪಾತ್ರೆ, ಗಡಿಗೆ, ಮಡಿಕೆ |

1) wind the clock ಗಡಿಯಾರಕ್ಕೆ ಕೀಲೀ ಕೊಡು.

2) ಇದಕ್ಕೆ ಒಂದು ಕಡೆಗೆ ಲೋಹದ ಹಿಡಿಕೆ, ಮತ್ತೊಂದು ಕಡೆಗೆ ಎರಡು ಮೂರು ಮುಳ್ಳುಗಳಿದ್ದು ಇದನ್ನು ಯುರೋಪದ ಜನರು ಊಟ ಮಾಡುವಾಗ ತಿನ್ನುವ ಪದಾರ್ಥಗಳನ್ನು ಹಿಡಿಯುವದಕ್ಕೂ ಮತ್ತು ಬಾಯಿಯಲ್ಲಿ ಎಸೆಯುವದಕ್ಕೂ ಉಪಯೋಗಿಸುವರು.

3) ಬೇರೆ ಯಾವನಾದರೊಬ್ಬ ಮತ್ತೊಬ್ಬ another; (ಇಬ್ಬರಲ್ಲಿ) ಇನ್ನೊಬ್ಬ the other, Another ಎಂಬದು ಒಂದೇ ಶಬ್ದವದೆ. ಇದರ ಉಚ್ಚಾರ 'ಅನದರ' ಎಂತೆ ಆಗುತ್ತದೆ.

4) Flat roofed houses = ಮಾಳಿಗೇ ಮನೆಗಳು.

## ಭಾಷಾಂತರಪಾಠ ೧೮.

೨೦೪ 1 like little lambs better than any other animals. 2 The best and wisest of men sometimes deceive themselves. 3 Most men see the faults of others sooner than their own. 4 You always see the faults of others; do you ever see your own? 5 A rich man is often a slave of riches. 6 Those birds will leave our garden altogether. 7 The boys *caught* some flies and other insects. 8 The auctioneer *sold* all those things. 9 My friend *sent* me a present. 10 The girl *hurt* herself. 11 The old man *told* her many stories. 12 You *omitted* several words. 13 Will you return to-night? 14 His eldest son *became* a sailor. 15 My brother *lost* his stick. 16 They *lost* all their money. 17 All[1] the children *were* there. 18 I *fell* down and *hurt* my knees. 19 Will you tell them so? 20 *Did* you ever see so[2] wise a judge? 21 Who ever *saw* such a monarch? 22 I never *heard* such a thing before. 23 *Did* you ever hear such a wonderful story before? 24 Is he so bad? 25 Which of you *broke* the window? 26 He *gave* me some handkerchiefs. 27 Several of those houses *had* flat roofs. 28 I *bought* some knives and forks. 29 I *paid* the man seven rupees. 30 The little boy *got* a new satchel. 31 *Did* you ever see a lion? 32 Give me a glass of water. 33 He *made* me

1) The ಎಂಬ ಉಪಪದವು all ಎಂಬ ವಿಶೇಷಣದ ಮುಂದೆ ಬರುತ್ತದೆ.

2) So ಎಂಬ ಕ್ರಿಯಾವಿಶೇಷಣವು ಒಂದು ವಿಶೇಷಣಕ್ಕೆ ಸಂಬಂಧಿಸಿದ್ದು ಮುಂದೆ ನಾಮಪದವಿದ್ದರೆ a ಅಥವಾ an ಎಂಬ ಉಪಪದವು ಆ ವಿಶೇಷಣದ ಮುಂದೆ ಬರುತ್ತದೆ. ಬಹುವಚನದಲ್ಲಿ ಇಂಥ ಕಡೆಯಲ್ಲಿ so ಎಂಬದಕ್ಕೆ ಬದಲಾಗಿ such ಹಾಕುತ್ತಾರೆ. ಹೇಗಂದರೆ Such wise judges. Such ದ ಮುಂದೆ ಏಕವಚನ ನಾಮಪದವಿದ್ದರೆ a ಅಥವಾ an ಎಂಬುದು ವಿಶೇಷಣದ ಹಿಂದೆ ಬರುತ್ತದೆ. [illegible] Such a wise judge.

a bow. 34 He *did* not say a word. 35 The servant *swept* my room. 36 Who ate those mangoes? 37 The old man *drove* the dog away. 38 The cat *caught* some mice last night. 39 Who *broke* this lamp? 40 The sun *shone* and the birds *sang* merrily.

---

೧ ಈ ಅಂದವಾದ ಕನ್ನಡಿಯನ್ನು ನೀನು ಒಡೆದಿಯಾ? ೨ ಇಲ್ಲ ಸ್ವಾಮಿ, ನಾನು ಒಡೆಯಲಿಲ್ಲ. ೩ ಹೀಗೆ ನಿಮಗೆ ಯಾರು ಹೇಳಿದರು? ೪ ನನಗೇ ನಿನ್ನ ಮೇಲೆ ಸಂಶಯ ಬಂತು. ೫ ನನಗೆ ಹೀಗೆ ತೋರಿತು. ೬ ರಾಮನು ಸಹ ಹೀಗೆ ಅಂದನು ೭ ಈ ಹುಡುಗಿಯು ಯಾರ ಮಗಳು? ೮ ಆಕೆ ನಮ್ಮ ನೆರೆ ಮನೆಯವರ ಮಗಳು. ೯ ಬಳಿಕ ನೀವು ಎಲ್ಲಿ ಹೋದಿರಿ? ೧೦ ನಿನಗೆ ನೆನಸಿಲ್ಲವೋ? ೧೧ ಆತನಿಗಿಷ್ಟು ಮುತ್ತುಗಳನ್ನು ಕೊಡುತ್ತಿಯಾ? ೧೨ ನೀವು ಅವುಗಳನ್ನು ಯಾಕೆ ತಿರುಗಿ ಕೊಡುತ್ತೀರಿ? ೧೩ ಅವುಗಳ ಬೆಲೆ ಏನು? ೧೪ ಅವನ ಹತ್ತರ ಬಹಳ ವಜ್ರಗಳಿದ್ದವು. ೧೫ ಆ ಸದ್ಗುಣವುಳ್ಳ ಪುರುಷನು ಇಂಥಾದ್ದು ಎಂದಿಗೂ ಮಾಡಲಿಲ್ಲ. ೧೬ ಕೈದಿಗೆ ಈ ಮಾತು ಗೊತ್ತಿತ್ತೋ? ೧೭ ಅಲ್ಲಿ ಎಷ್ಟು ಜನರು ಇದ್ದರು? ೧೮ ನಿನಗೆ ಎಷ್ಟು ರೂಪಾಯಿ ಬೇಕು? ೧೯ ನೀನು ಎಷ್ಟು ಸಕ್ಕರೆ ತಂದೆ? ೨೦ ಅವನು ಎಷ್ಟು ಎಣ್ಣೆ ಕೊಂಡನು? ೨೧ ಆಕೆ ಈ ಪುಸ್ತಕವನ್ನು ಆರಿಸಿ ತೆಗೆದಳು. ೨೨ ಅವನು ತುತೂರಿ ಊದಿದನು. ೨೩ ಗಾಳಿಯು ಬೀಸುತ್ತಿತ್ತು. ೨೪ ಈ ಗಡಿಗೆಯನ್ನು ಯಾರು ಒಡೆದರು? ೨೫ ಸಿಂಪಿಗನು ಬಟ್ಟೆ ಹರಿದನು. ೨೬ ಬಂಡಿಯವನು ಕೂಡಲೇ ಬಂಡಿ ಹೊಡೆದನು. ೨೭ ಅವನನ್ನು ನಾಯಿ ಕಚ್ಚಿತು. ೨೮ ಹಾವು ಮೆಲ್ಲಗೆ ಹರಿದಾಡುತ್ತ ಹೋಗುತ್ತಿತ್ತು. ೨೯ ಆ ಕುರ್ಚಿಗೆ ನಾನು ಎರಡು ರೂಪಾಯಿ ಕೊಟ್ಟೆನು! ೩೦ ನೀನು ಇಷ್ಟು ಹಣ ಯಾಕೆ ಖರ್ಚು ಮಾಡಿದೆ? ೩೧ ಅವನು ಎಲ್ಲಿ ಇದ್ದನು? ೩೨ ನೀನು ಆ ಹಣ ಯಾಕೆ ಕೈಗಡ ಇಸಕೊಂಡೆ? ೩೩ ನನಗೆ ರಾಮನ ಸಾಲ ಬಹಳ ಆದೆ. ೩೪ ಅವನು ನನಗೆ ಬಹಳ ಹಣ ಕೈಗಡ ಕೊಟ್ಟನು. ೩೫ ಇದನ್ನೆಲ್ಲ ನಿನಗೆ ಯಾರು ಕಲಿಸಿದರು? ೩೬ ಈ ಅಣ್ಣತಮ್ಮಂದಿರೆಲ್ಲರು ವಿದ್ವಾಂಸರಾಗಿದ್ದಾರೆ. ೩೭ ಅವರಲ್ಲಿ ಒಬ್ಬನು ನನ್ನ ಮೇಲೆ ಬಹಳ ಪ್ರೀತಿ ಮಾಡುತ್ತಿದ್ದನು. ೩೮ ನನಗೆ ಒಂದು ಭಯಂಕರವಾದ ಸಪ್ಪಳವು ಕೇಳಿಸಿತು. ೩೯ ಅವನು ನೀರು ಕುಡಿದನು. ೪೦ ನಿನಗೆ ಹಾದೀ ಯಾರು ತೋರಿಸಿದರು?

## ೧೯ ನೇ ಪಾಠ.

### ಪೂರ್ಣವರ್ತಮಾನಕಾಲ.

### Present Perfect Tense.

೧೦೫ 'ಹೋದ ಕಾಲದಲ್ಲಿ ಆರಂಭಿಸಿದ ಕ್ರಿಯೆಯು ನಡೆಯುವ ಕಾಲದಲ್ಲಿ ಮುಗಿದದೆ, ಅಥವಾ ಹೋದ ಕಾಲದಲ್ಲಿ ಮಾಡಿದ ಕ್ರಿಯೆಯ ಫಲವು ನಡೆಯುವ ಕಾಲದಲ್ಲಿ ಸಿದ್ಧವಾಗಿದೆ' ಎಂಬ ಅರ್ಥವಿರಲಾಗಿ ಪೂರ್ಣವರ್ತಮಾನಕಾಲವನ್ನು ಪ್ರಯೋಗಿಸಬೇಕು. ಕ್ರಿಯಾಪದದ ಭೂತಕೃದ್ವಾಚಕದ ಹಿಂದೆ to have ಎಂಬದರ ವರ್ತಮಾನಕಾಲವನ್ನು ಜೋಡಿಸುವದರಿಂದ ಆ ಕ್ರಿಯಾಪದದ ಪೂರ್ಣವರ್ತಮಾನಕಾಲವಾಗುತ್ತದೆ.

ಉದಾ—To write ಎಂಬದರ ಪೂರ್ಣವರ್ತಮಾನಕಾಲ.

| | ಏಕವಚನ. | ಬಹುವಚನ. |
|---|---|---|
| 1 | I have written | We have written. |
| 2 | Thou hast written | You have written. |
| 3 | He, she, it has written. | They have written. |

ಇವುಗಳ ಅರ್ಥಗಳು ನಾನು ಬರೆದಿದ್ದೇನೆ, ನೀನು ಬರೆದಿದ್ದೀ ಇತ್ಯಾದಿ.

೧೦೬ [illegible] ಒಮ್ಮೊಮ್ಮೆ ಇಂಗ್ಲಿಷದೊಳಗಿನ ಪೂರ್ಣವರ್ತಮಾನಕಾಲಕ್ಕೆ ಬದಲಾಗಿ ಕನ್ನಡದಲ್ಲಿ ಶುದ್ಧ ಭೂತಕಾಲವನ್ನು ಪ್ರಯೋಗಿಸಬೇಕಾಗುತ್ತದೆ.

ಉದಾ—Where *have* you *been* all this time? ಇಷ್ಟು ಹೊತ್ತು ನೀವು ಎಲ್ಲಿ ಇದ್ದಿರಿ?

ಇದೇ ಮೇರೆಗೆ to sit, to stand, to sleep ಮುಂತಾದ ಸ್ಥಿತಿವಾಚಕ ಕ್ರಿಯಾಪದಗಳಿರಲು ಅಪೂರ್ಣವರ್ತಮಾನಕಾಲವಿದ್ದಲ್ಲಿ ಪೂರ್ಣವರ್ತಮಾನವನ್ನು ಹಾಕಬೇಕಾಗುತ್ತದೆ.

ಉದಾ:-Why *are* you *sitting* here? ನೀನು ಇಲ್ಲಿ ಯಾಕೆ ಕೂತಿದ್ದಿ?

೧೦೭ ಇಂಗ್ಲಿಷದಲ್ಲಿ **have been** ಎಂಬ ಕ್ರಿಯಾಪದದ ವರ್ತಮಾನ ನ್ಯೂನವನ್ನು ಕೂಡಿಸುವದರಿಂದ ಒಂದು ಕಾಲವಾಗುತ್ತದೆ. ಅದರ ಅರ್ಥವೇನಂದರೆ ಹೋದ ಕಾಲದಲ್ಲಿ ಆರಂಭಿಸಿದ ಕ್ರಿಯೆಯು ನಡೆಯುವ ಕಾಲದ ವರೆಗೆ ಸಾಗುತ್ತ ಬಂದಿದೆ, ಅದು ಇನ್ನೂ ಮುಗಿದದೆಯೋ, ಇಲ್ಲವೋ ತಿಳಿಯುವದಿಲ್ಲ. ಇದಕ್ಕೆ ಸಮಾನವಾದ ಕಾಲವು ಕನ್ನಡದಲ್ಲಿ ಇಲ್ಲ. ಆದರೆ, ಆಗಾಗ್ಗೆ ಕನ್ನಡದೊಳಗಿನ ಅಪೂರ್ಣವರ್ತಮಾನಕಾಲದ ಅರ್ಥವು ಹಾಗಾಗುತ್ತದೆ. ಆದಕಾರಣ ಇಂಗ್ಲಿಷದಿಂದ ಭಾಷಾಂತರ ಮಾಡುವಾಗ ಈ ಕಾಲವನ್ನು ಪ್ರಯೋಗಿಸಬೇಕು.

ಉದಾ:-**I have been writing** ನಾನು ಕೆಲಕಾಲದಿಂದ ಬರೆಯುತ್ತಾ ಇದ್ದೇನೆ.

### ೧೦೮ ಶಬ್ದಸಂಗ್ರಹ ೧೯.

| | | | |
|---|---|---|---|
| **To fol'low** | ೧ ಅನುಸರಿಸು; ೨ ಹಿಂಬಾಲಿಸು. | **Bus'iness** | ಕೆಲಸ, ಉದ್ಯೋಗ. |
| **A gen'er-al** | ಸೇನಾಪತಿ, ದಳವಾಯಿ. | **Chief, prin'cipal** | ಮುಖ್ಯವಾದ. |
| **Troops** | ದಂಡು, ಸೈನ್ಯ. | **An arch'er** | ಬಿಲ್ಲುಗಾರ, ಧನುರ್ಧಾರಿ. |
| **A prey** | ೧ ಬೇಟೆ, ಭಕ್ಷ್ಯ; ೨ ಊಟ. | **An ar-row** | ಬಾಣ, ಅಂಬು. |
| **The weath'er** | ಋತುಮಾನದ ಗಾಳಿ, ಹವೆ. | **Ar'riv'al** | ಮುಟ್ಟುವದು, ತಲಪುವದು. |
| **Might** | ಶಕ್ತಿ, ಬಲ. | **A prison** | ಸೆರೆಮನೆ ಕಾರಾಗೃಹ, ಬಂದೀಖಾನೆ. |
| **Right** | ಹಕ್ಕು, ಬಾಧ್ಯತೆ. | **To ad-vice** | ಉಪದೇಶ ಮಾಡು, ಬುದ್ಧೀ ಹೇಳು |
| **Tooth-ache** | ಹಲ್ಲುನೋವು. | **Mo-ral'ity** | ನೀತಿ, ಧರ್ಮ, ಸದಾಚಾರ. |
| **To load** | ಹೇರು, ಹೊರಿಸು | **To in-vite** | ಅವ್ರತಣ ಹೇಳು, ಕೊಡು. |
| **De-lay** | ತಡ, ವಿಲಂಬ. | **To dis-grace** | ಅಪಮಾನ ಮಾಡು. |
| **Advice'** | ಉಪದೇಶ, ಬುದ್ಧೀಮಾತು. | **Ev'en** | ಸಹ, ಆದರೂ. |
| **Dan'ger-ous** | ಅಪಾಯಕರ, ಗಂಡಾಂತರದ. | **Yet, still** | ಇನ್ನೂ. |
| **To con-ceal** | ಅಡಗಿಸು, ಬಚ್ಚಿಡು. | **To dis-re-gard** | ಅಲಕ್ಷ ಮಾಡು, ಉಪೇಕ್ಷಿಸು. |
| **A pome'gra-nate**[1] | ದಾಳಿಂಬರ ಹಣ್ಣು. | **To march** | ಕೂಡು ಮಾಡು, ಕ್ರಮದಿಂದ ನಡೆ, ಮುನ್ನಡೆ. |

1) ಈ ಶಬ್ದದ ಉಚ್ಚಾರವನ್ನು ಎಷ್ಟೋ ಜನರು 'ಪಮ್‌ಗ್ರಾನೇಟ್' ಎಂತ ಸಹ ಮಾಡುತ್ತಾರೆ.

(ತಾಳಿಕೊಳ್ಳುವ) ಧೈರ್ಯ for'ti-tude[1].
ಗೊಂಬೆ a doll, a pup'pet.
ಹಿಟ್ಟು flour, meal.
ನಡತೆ, ಆಚರಣೆ be-hav'iour.

ಸೆರೆಯಲ್ಲಿಡು To im-pris'on.
ಪರದೇಶದವನು a for-eign-er.
ದುಂದು ಮಾಡು, ಹಾಳು ಮಾಡು } to squan'der.

## ಭಾಷಾಂತರಪಾಠ ೧೯.

೧೦೯. 1 We *have left* all and *followed* thee[2]. 2 The young lions seek their prey. 3 This weather will freeze the lake and the rivers. 4 The general *has ordered* his troops to march. 5 The merchants *have loaded* the camels. 6 Will the bullocks draw the cart? 7 He *has shod* the horse. 8 The woman *has* been *grinding* corn. 9 The shepherds *have been shearing* the sheep. 10 We *have met* before. 11 Where *have* you *kept* the pomegranates? 12 He kept his word. 13 What do you mean? 14 The artisan is gilding that frame of the mirror. 15 That boy *has been flinging* the stones. 16 She is feeding[3] the infant. 17 Fortitude *has forsaken* him. 18 The gardener *has watered* the plants. 19 I *have* not *seen* you before. 20 The boys *have learnt* their lessons. 21 I *have* never *had* the toothache. 22 Always do your duty. 23 What *has* the prisoner *done*? 24 What did you do? 25 How do you do?[4] 26 Make hay while the sun shines[5]. 27 Delay is always dangerous. 28 We *have finished* our work. 29 The thief *has concealed* the ornaments. 30 The owner *has* not *sold* the house. 31 You *have paid* the artist a large sum of money.

---

1) ಧೈರ್ಯದಿಂದಲೂ ಶಾಂತರೀತಿಯಿಂದಲೂ ದುಃಖವನ್ನು ತಾಳಿಕೊಳ್ಳುವದಕ್ಕಾಗಿ, ಗಂಡಾಂತರಕ್ಕೆ ಎದೆಗೊಡುವದಕ್ಕಾಗಿ ಅನುಕೂಲ ಮಾಡಿಕೊಡುವ ಮನಸ್ಸಿನ ಗಟ್ಟಿತನಕ್ಕೆ ಇಲ್ಲವೆ ದೃಢತ್ವಕ್ಕೆ ಈ ಶಬ್ದವನ್ನು ಉಪಯೋಗಿಸತಕ್ಕದ್ದು. 2) ಪುಟ ೨೯, ಟಿಪ್ಪಣಿ ೨ ನೋಡು. 3) ಉಣ್ಣಿಸುತ್ತಿದ್ದಾಳೆ. ಅಥವಾ ಹೊಟ್ಟೆಗೆ ಹಾಕುತ್ತಿದ್ದಾಳೆ. 4) ನೀವು ಕ್ಷೇಮದಿಂದಿದ್ದೀರಾ? 5) ಗಾಳಿ ಬಂದಾಗ ತೂರಿಕೋ.

32 I *have* not spent even a rupee. 33 You *have forgotten* my advice. 34 He *has* not *finished* his dinner. 35 The bird *has flown.*

೧ ಅವನು ಒಳ್ಳೇ ಮಾವಿನ ಹಣ್ಣುಗಳನ್ನು ಆರಿಸಿ ತೆಗೆದಿದ್ದಾನೆ. ೨ ಇಲ್ಲಿ ಹತ್ತು ಮಾವಿನ ಹಣ್ಣುಗಳವೆ; ಇವುಗಳಲ್ಲಿ ನೀನು ಆರಿಸಿ ತೆಗೆದಂಥವು ಯಾವವು ? ೩ ಆ ಹುಡುಗಿ ತನ್ನ ಗೊಂಬೆಗೆ ಬಟ್ಟೆಯನ್ನು ಉಡಿಸಿದ್ದಾಳೆ. ೪ ಅವನು ಇನ್ನೂ ಬಂದಿಲ್ಲ. ೫ ನಮ್ಮ ಅತಿಥಿಯು ಇದೇ ಈಗ ಹೊರಗೆ ಹೋಗಿದ್ದಾನೆ. ೬ ಅತನು ಈ ಹೊತ್ತು ಇಲ್ಲಿ ಉಳಕೊಳ್ಳುವನು[1]. ೭ ಕೋಳಿಯು ಕೂಗುತ್ತದೆ. ೮ ಚಿತ್ರಗಾರನು ಒಂದು ಚೆಂದವಾದ ಚಿತ್ರವನ್ನು ತೆಗೆದಿದ್ದಾನೆ. ೯ ಕುದುರೆಗಳು ರಥವನ್ನು ಎಳೆಯುತ್ತವೆ. ೧೦ ನನಗೆ ಒಂದು ಕನಸು ಬಿತ್ತು. ೧೧ ಅವರು ಮೊದಲು ಅಲ್ಲಿ ಇರುತ್ತಿದ್ದರು. ೧೨ ಅವನು ನಿನ್ನ ಉಂಗುರವನ್ನು ಕದ್ದಿದ್ದಾನೆ. ೧೩ ಅವನ ಟೊಪ್ಪಿಗೆ ಕೆಳಗೆ ಬಿತ್ತು. ೧೪ ಅವನು ತನ್ನ ಪಾಟೀ[2] ಒಡಕೊಂಡಿದ್ದಾನೆ. ೧೫ ನಿನ್ನನ್ನು ಯಾರು ಗದರಿಸಿದರು ? ೧೬ ಅವನಿಗೆ ಬಹಳ ಗ್ರಂಥಗಳು ಸಿಕ್ಕಿವೆ. ೧೭ ಅವನು ಎಷ್ಟೋ ಗ್ರಂಥಗಳನ್ನು ಶೋಧಿಸಿ ತೆಗೆದಿದ್ದಾನೆ. ೧೮ ನಾವು ಆ ಕೆಲಸವನ್ನು ಆರಂಭಿಸಿದ್ದೇವೆ. ೧೯ ನಿನ್ನ ಒಡೆಯನು ಆ ಒಡವೆಗಳನ್ನು ಎಲ್ಲಿ ಇಟ್ಟಿದ್ದಾನೆ ? ೨೦ ನಾನು ಇದನ್ನು ಅನುಭವಿಸಿದ್ದೇನೆ. ೨೧ ನಮ್ಮ ನೆರಮನೆಯ ಹುಡುಗಿಯು ಆ ಹಿಟ್ಟು ಚೆಲ್ಲಿದಳು. ೨೨ ಈ ಎಣ್ಣೆ ಯಾರು ಚೆಲ್ಲಿದರು ? ೨೩ ನಾವು ನಿಮ್ಮನ್ನು ಕ್ಷಮಿಸಿದ್ದೇವೆ. ೨೪ ನಾನು ಅವನಿಗೆ ಹೀಗೆ ಹೇಳಿದ್ದೇನೆ. ೨೫ ಅವನು ನಿನಗೆ ಏನು ಕೊಟ್ಟಿದ್ದಾನೆ ? ೨೬ ಈ ಸುದ್ದಿಯನ್ನು ನಿನಗೆ ಯಾರು ಹೇಳಿದರು ? ೨೭ ನೀನು ಅವನ ಮೊದಲಿನ ಅಪರಾಧಗಳನ್ನು ಮರೆತು ಬಿಟ್ಟಿದ್ದೀ. ೨೮ ಆ ಹುಡುಗನು ತನ್ನ ಬೆರಳುಗಳನ್ನು ಸುಟ್ಟುಕೊಂಡಿದ್ದಾನೆ. ೨೯ ಅವನು ತನ್ನ ಆಸ್ತಿಯನ್ನೆಲ್ಲ ಹಾಳು ಮಾಡಿ ಬಿಟ್ಟನು. ೩೦ ನಿನ್ನ ಕಿರಿಯ ಮಗನು ನನ್ನ ಹೊಸ ಅಂಗಿಯನ್ನು ಹರಿದಿದ್ದಾನೆ. ೩೧ ಆ ಪರಕೀಯ ಮನುಷ್ಯನು ಕೆಲವು ಪಕ್ಷಿಗಳನ್ನು ಹಿಡಿದಿದ್ದಾನೆ. ೩೨ ನಾನು ನಿನಗೆ ಈ ಮಾತು ಮೊದಲೇ[3] ಹೇಳಿದ್ದೇನೆ. ೩೩ ನೀನು ಬಹಳ ಹಣ ಸಂಪಾದಿಸಿದ್ದೀ. ೩೪ ಅವರು ಆ ಅರಸನನ್ನು ಸೆರೆಯಲ್ಲಿಟ್ಟಿದ್ದಾರೆ. ೩೫ ಆ ವರ್ತಕನು ನನಗೆ ಬಹಳ ಸಹಾಯ ಮಾಡಿದ್ದಾನೆ. ೩೬ ಅವನಿಗೆ ಪಶ್ಚಾತ್ತಾಪವಾಗಲಿಲ್ಲ. ೩೭ ನಾನು ಅವನ ಗುರುತು ಹಿಡಿಯಲಿಲ್ಲ. ೩೮ ಒಂದು[4] ಕೋಳಿಗೆ ಒಂದು ರತ್ನವು ಸಿಕ್ಕಿತು. ೩೯ ಅವರು ಇಷ್ಟು ಧೈರ್ಯವನ್ನು ಮುಂಚೆ ಎಂದೂ ತೋರಿಸಲಿಲ್ಲ. ೪೦ ರಾವಣನು ಲಂಕಾಪಟ್ಟಣದ ಅರಸನಿದ್ದನು. ೪೧ ನಾವು ಅವನಿಗೆ ಬಹಳ ಉತ್ತೇಜನ

1) Halt ಅಥವಾ Stop. 2) Slate. 3) Already.
4) ಒಂದು, ಒಂದಾನೊಂದು ... a, a certain.

ಕೊಟ್ಟೆವು. ೪೨ ನಾವು ಅವನಿಗೆ ಮನಗಾಣಿಸಿ ಕೊಟ್ಟದ್ದೇವೆ. ೪೩ ಸೇನಾಪತಿಯು ನನ್ನನ್ನು ಕರೆದಿದ್ದಾನೆ. ೪೪ ಒಕ್ಕಲಿಗರು ಹೊಲಗಳನ್ನು ಹರಗಿದ್ದಾರೆ. ೪೫ ಆ ಉದ್ಯೋಗಸ್ಥನು ನಿನ್ನ ಶಿಫಾರಸು ಮಾಡಿದ್ದಾನೆ. ೪೬ ಆ ಮುಂಡಾಸು ನನಗೆ ಬಹಳ ತುಟ್ಟಿ ಬಿತ್ತು[1]. ೪೭ ಈಗ ಅದಕ್ಕೆ ಎಷ್ಟು ಬೆಲೆ ಬಂದೀತು ? ೪೮ ಅವನ ನಡತೆ ನನ್ನ ಮನಸ್ಸಿಗೆ ಬರುವದಿಲ್ಲ. ೪೯ ನಾನು ನಿನಗೆ ಏನು ಹೇಳಿದೆನು ? ೫೦ ಕೆಲ ಜನರಿಗೆ ತಮ್ಮ ದೇಶಬಾಂಧವರಿಗಿಂತ ಪರದೇಶದವರು ಹೆಚ್ಚು ಪ್ರಿಯರಾಗುತ್ತಾರೆ.

---

## ೨೦ ನೇ ಪಾಠ.

### ಉಪಸರ್ಗಾನ್ವಯಗಳು.

### PREPOSITIONS.

೧೧೧ ಇಂಗ್ಲಿಷದಲ್ಲಿ ಉಪಸರ್ಗಾನ್ವಯಗಳು ನಾಮಪದದ ಇಲ್ಲವೆ ಸರ್ವನಾಮದ ಹಿಂದೆ ಬರುತ್ತವೆ; ಮತ್ತು ಆ ನಾಮಪದವಾಗಲಿ ಸರ್ವನಾಮವಾಗಲಿ Objective Case[2] ಆಗುತ್ತದೆ.

೧೧೧ From—ಇಂದ ಎಂಬ ಉಪಸರ್ಗಾನ್ವಯದಿಂದ ಒಮ್ಮೊಮ್ಮೆ ಪಂಚಮಿ ಸೂಚಿತವಾಗಿ ಚತುರ್ಥೀ ವಿಭಕ್ತಿಯ ಅರ್ಥವಾಗುತ್ತದೆ. ಉದಾ:—

He has come *from* Benares ಅವನು ಕಾಶಿಯಿಂದ ಬಂದನು.
Dharwar is forty-eight miles *from* Belgaum ಧಾರವಾಡಕ್ಕೂ ಬೆಳಗಾಂವಿಗೂ ನಾಲ್ವತ್ತೆಂಟು ಮೈಲು.

೧೧೨ ಇಂಥದೊಂದು ನಿಯಮಿತವಾದ ಭೂತಕಾಲದಿಂದ ಈಗಿನ ವರೆಗೆ ಎಂಬ ಅರ್ಥವಿರಲಾಗಿ — ಇಂದ ಎಂಬುದಕ್ಕೆ since ಎಂಬ

---

1) I bought the turban very dear.

2) Accusative ದ್ವಿತೀಯಾ, Instrumental ತೃತೀಯಾ, Dative ಚತುರ್ಥೀ, Ablative ಪಂಚಮಿ, Genitive (with of) ಷಷ್ಠೀ, Locative ಸಪ್ತಮಿ. ಈ ವಿಭಕ್ತಿಗಳಿಗೆಲ್ಲ Objective case ಅನ್ನಬಹುದು, ಯಾಕೆಂದರೆ, ಇವುಗಳ ಹಿಂದೆ ಉಪಸರ್ಗಾನ್ವಯಗಳು ಬರುತ್ತವೆ. ಕನ್ನಡದಂತೆ ಇಂಗ್ಲಿಷ ಭಾಷೆಯಲ್ಲಿ ಈ ವಿಭಕ್ತಿಗಳಿಗೆ ಪ್ರತ್ಯಯಗಳಿಲ್ಲದ್ದರಿಂದ ಆ ಪ್ರತ್ಯಯಗಳಿಗೆ ಬದಲಾಗಿ ಶಬ್ದಗಳ ಹಿಂದೆ ಉಪಸರ್ಗಾನ್ವಯಗಳನ್ನು ಪ್ರಯೋಗಿಸುತ್ತಾರೆ.

ಉಪಸರ್ಗಾವ್ಯವನ್ನು ಪ್ರಯೋಗಿಸಬೇಕು. ಉದಾ:—

I have not seen my brother *since* Monday ಸೋಮವಾರದಿಂದ ನಾನು ನನ್ನ ತಮ್ಮನನ್ನು ಕಂಡಿಲ್ಲ.

ಆದರೆ ಬೇರೆ ಕಡೆಯಲ್ಲಿ ಕಾಲವಾಚಕ ನಾಮಪದಗಳ ಹಿಂದೆ from[1] ಎಂಬ ಅವ್ಯಯವನ್ನು ಪ್ರಯೋಗಿಸಬಹುದು. ಉದಾ:—

From that time they loved each other ಅಂದಿನಿಂದ ಅವರು ಒಬ್ಬರನ್ನೊಬ್ಬರು ಪ್ರೀತಿ ಮಾಡುತ್ತಿದರು.

೧೧೩. In, into ಎಂಬ ಉಪಸರ್ಗಾವ್ಯಯಗಳಿಂದ ಸಪ್ತಮೀ ವಿಭಕ್ತಿಯ ಅರ್ಥವಾಗುತ್ತದೆ. ಹೊರಗಿನಿಂದ ಒಳಗೆ[2] ಎಂದು ಗತಿ ತೋರಿಸುವದಾದರೆ into ಎಂಬದನ್ನೂ, ಒಂದೇ ಸ್ಥಳದಲ್ಲಿ ಇರುವಿಕೆ ಇಲ್ಲವೆ ಅದರಲ್ಲಿಯೇ ಸುಳಿದಾಟ ವಿದ್ದರೆ in ಎಂಬದನ್ನೂ ಪ್ರಯೋಗಿಸಬೇಕು. ಉದಾ:—

He plunged his hand *into* the water ಅವನು ನೀರೊಳಗೆ ತನ್ನ ಕೈ ಎದ್ದಿದನು.
Many animals live *in* water ಅನೇಕ ಪ್ರಾಣಿಗಳು ನೀರೊಳಗಿರುತ್ತವೆ.
I went *into* the room ನಾನು ಕೋಣೆಯೊಳಗೆ ಹೋದೆನು.
I was *in* the room ನಾನು ಕೋಣೆಯೊಳಗಿದ್ದೆನು.
I went *into* the garden ನಾನು ತೋಟದೊಳಗೆ ಹೋದೆನು.
He is walking *in* the garden ಅವನು ತೋಟದೊಳಗೆ ತಿರುಗಾಡುತ್ತಲಿದ್ದಾನೆ.

---

1) 'ಭೂತಕಾಲದಲ್ಲಿ ಆರಂಭಿಸಿದ ಯಾವದಾದರೊಂದು ಕ್ರಿಯೆಯು ವರ್ತಮಾನ ಕಾಲದಲ್ಲಿ ಮುಗಿದದೆ' ಎಂಬ ಅರ್ಥದಿಂದ from ವನ್ನಾಗಲೀ since ವನ್ನಾಗಲಿ ಪ್ರಯೋಗಿಸಬಹುದು.

ಉದಾ: I have done this work *since* January.

ಅಥವಾ I have done this work *from* January *till* now.
ನಾನು ಈ ಕೆಲಸವನ್ನು ಜನವರಿಯಿಂದ ಇಲ್ಲಿಯ ವರೆಗೆ ಮಾಡಿದ್ದೇನೆ.

ಮೊದಲನೇ ವಾಕ್ಯದಲ್ಲಿ ಕ್ರಿಯೆಯು ಮುಗಿದ ವೇಳೆಯನ್ನು ಹೇಳುವ ರೂಢಿ ಇಲ್ಲ; ಆದರೆ ಆ ಕ್ರಿಯೆಯು ವರ್ತಮಾನಕಾಲವಲ್ಲದೆ ಬೇರೆ ಯಾವ ಕಾಲದಲ್ಲಾದರೂ ಮುಗಿಯುತ್ತಿದ್ದರೆ, from ಎಂಬದನ್ನೇ ಪ್ರಯೋಗಿಸಬೇಕು.

ಉದಾ: I did this work *from* January *till* now.

ನಾನು ಈ ಕೆಲಸವನ್ನು ಜನವರಿಯಿಂದ ಮಾರ್ಚದ ವರೆಗೆ ಮಾಡಿದೆನು. ಇಂಥಲ್ಲಿ since ಎಂಬ ಅವ್ಯಯವನ್ನು ಪ್ರಯೋಗಿಸಲಾಗದು.

2) ಒಳಗಿನಿಂದ ಹೊರಗೆ ಹೋಗು ಎಂಬ ಅರ್ಥದಲ್ಲಿ out of ಎಂಬ ಸಂಯುಕ್ತ ಅವ್ಯಯವು ಬರುತ್ತದೆ.

ಉದಾ: He drew his hand *out of* the water ಅವನು ತನ್ನ ಕೈ ನೀರೊಳಗಿಂದ ಹೊರಗೆ ತೆಗೆದನು.

## ೧೨೪ ಶಬ್ದಸಂಗ್ರಹ ೨೧.

| | | | |
|---|---|---|---|
| A knot | ಗಂಟು. | U'su-al | ವಾಡಿಕೆಯ, ರೂಢಿಯ, ದಿನದ. |
| A no'ble-man | ಸರದಾರ, ಘನವಂಶ. | To un'do | ೧ ಮಾಡಿದ್ದು ಕೆಡಿಸು; ೨ ಬಿಚ್ಚು. |
| A na'tion | ಜನಾಂಗ, ರಾಷ್ಟ್ರ, | To bruise | ಜಜ್ಜು. |
| A fruit'-garden<br>An or'chard | ಹಣ್ಣುತೋಟ. | To man'age | ೧ ನಡಿಸು; ೨ ಸಂಭಾಳಿಸು; ೩ ಆಟೋಪದಲ್ಲಿಟ್ಟುಕೋ, ಅಳತೆ ಮಾಡು. |
| A com'pound | ೧ ವಠಾರ, ೨ ಮಿಶ್ರಣ. | To spoil | ಕೆಡಿಸು. |
| A noise | ಗದ್ದಲ, ಸಪ್ಪಳ | Rea'dily | ೧ ಸಂಕೋಚದಿಂದ; ೨ ಶೀಘ್ರವಾಗಿ, ಸತ್ವರ, ಶೀಘ್ರವಾಗಿ. |
| The char'ac-ter | ೧ ಶೀಲ; ೨ ಕೀರ್ತಿ, ಹೆಸರು; ೩ ಸ್ವಭಾವ, ಗುಣ, ಲಕ್ಷಣ; ೪ ಅಕ್ಷರ. | To re-ceive | ೧ ತಕ್ಕೊಳ್ಳು, ಹೊಂದು; ೨ ಅಂಗೀಕರಿಸು. |
| A pas'sion | ೧ ಮನೋವಿಕಾರ; ೨ ಮೋಹ; ೩ ಸಿಟ್ಟು. | Dread'ful-ly | ಭಯಂಕರವಾಗಿ. |
| A li'ar | ಸುಳ್ಳುಗಾರ. | No'bly | ದೊಡ್ಡ ಮನಸ್ಸಿನಿಂದ, ಔದಾರ್ಯದಿಂದ. |
| So-ci'ety | ಸಂಗತಿ, ಸಹವಾಸ. | Pru'dently | ವಿವೇಕದಿಂದ. |
| Dirt | ಹೊಲಸು, ಮಲ. | Wet | ತೊಯ್ದ, ಒದ್ದೆಯಾದ. |
| A toy | ಆಟದ ಒಡವೆ, ಆಟಿಗೆ. | Saf'fron | ಕೇಸರಿ. |
| Haste | ೧ ತ್ವರೆ; ೨ ಒತ್ತರ; ೩ ಅವಸರ. | Ev'er-y | ಪ್ರತಿಒಬ್ಬ—ಒಂದು. |
| A for'est | ಅರಣ್ಯ, ಅಡವಿ, | Ear'ly | (ವಿ.) ಮುಂಚೆ ಬಂದ, ಬೇಗ. |
| Van'i-ty | ಬರೀ ಹೆಮ್ಮೆ, ದುರಭಿಮಾನ. | Ear'ly (ಕ್ರಿ. ವಿ.) | ಮುಂಚಿತವಾಗಿ, ಬೇಗನೆ. |

| | | | |
|---|---|---|---|
| Frivol'ity | ಲಘುತ್ವ, ತುಚ್ಛತೆ. | Late[1] | ತಕ್ಕ ಸಮಯ ಮೀರಿ ಬಂದ, ತಡವಾದ. |
| Wick'ed-ness | ದುಷ್ಟತನ, ದುರುಳುತನ. | Late (ಕ್ರಿ.ವಿ.) | ತಡವಾಗಿ, ಹೊತ್ತುಮಾಡಿ. |
| An under-ta'king | ಕೈಕೊಂಡ ಕೆಲಸ. | Of late, Late'ly | ಇತ್ತಲಾಗಿ. |
| Pe-cu'li-ar | ೧ ಸ್ವಂತ; ೨ ಒಂದು ತರದ, ಅಸಾಧಾರಣ, ವಿಶೇಷ. | ಉರಿಮೋರೆಯ ದುರ್ಮುಖವುಳ್ಳ | Sul'len, gloomy'. mo-rose (ಮೋರೋಸ) |
| ಒಳಗೆ ಹೋಗು, ಪ್ರವೇಶಿಸು | to en'ter. | ಒಣಗಿದ, ಬತ್ತಿದ | dry. |
| ಕಮಲ | a lo'tus. | ಕಾಣು, ತೋರು | to seem. to ap'pear. |
| ಯಾಲಕ್ಕಿ | a car'da-mom. | | |
| ಲವಂಗ | a clove. | ಇಳಿ, ಎರಗು | to a-light. to de-scend'. |
| ಜಾಜಿಕಾಯಿ | a nut'meg. | ರುಚಿಕರವಾದ | sa'vour-y. |

## ಭಾಷಾಂತರಪಾಠ ೨೦.

೧೧೫ 1 We always give advice more readily than money. 2 Every nation has its peculiar character. 3 Have we treated our enemies nobly ? 4 We see in men of all countries the same passions and the same vices. 5 Bad comany will spoil a man's character. 6 Vanity and

---

1) Late ಎಂಬದು ವಿಶೇಷಣವಿದ್ದಾಗ ಅದರ ತಾರತಮ್ಯಭಾವದರ್ಶಕ ರೂಪಗಳು later, latter ಎಂತಲೂ, latest, last ಎಂತಲೂ ಆಗುತ್ತವೆ. Later, latest ಎಂಬವು ಕಾಲವಾಚಕಗಳು. latter, last ಎಂಬವು ಕ್ರಮವಾಚಕಗಳೂ ಅವೆ. Late ಎಂಬದು ಕ್ರಿಯಾವಿಶೇಷಣವಿದ್ದಾಗ ಅದರಿಂದ later, latest ಎಂಬ ರೂಪಗಳಾಗುತ್ತವೆ. Latter, last ಎಂಬವು former, first ಎಂಬವುಗಳಿಗೆ ವಿರುದ್ಧವಾದವುಗಳು. ಉದಾ: The late rains have done good=ಮೊನ್ನಿನ ಮಳೆಯಿಂದ ಹಿತವಾಗಿದೆ. This is a later edition=ಇದು ಇತ್ತಿತ್ತ ಹೊರಟ ಆವೃತ್ತಿಯು. The latest discovery in science=ಶಾಸ್ತ್ರ ವಿಷಯದಲ್ಲಿ ಮೊನ್ನೆ ಮೊನ್ನೆ ಮಾಡಿದ ಶೋಧವು. The latter alternative = ಎರಡನೇ ಉಪಾಯ. The last of the Romans = ರೋಮನ್ ಜನರೊಳಗೆ ಕಟ್ಟಕಡೆಯವನು. I came late = ಸಾಸು ತಡಮಾಡಿ ಬಂದೆನು. He came later = ಅವನು ಹೆಚ್ಚು ತಡಮಾಡಿ ಬಂದನು. They came latest = ಅವರು ಎಲ್ಲರಿಗಿಂತ ಹೆಚ್ಚು ತಡಮಾಡಿ ಬಂದರು.

frivolity are not far from wickedness. 7 No one felt happy *in* her society. 8 We have many fruit trees *in* our garden. 9 Have you any oranges *in* your garden? 10 I saw some beautiful birds *in* the garden. 11 That man was formerly a servant *in* some nobleman's family. 12 Is he so still? 13 I received a letter *from* my father yesterday. 14 Will you undo that knot? 15 How did you bruise your fingers so dreadfully? 16 Did you ever see such a liar *in* all your life? 17 The maid went *into* the kitchen. 18 Who is making the noise *in* the kitchen? 19 You generally come very late; to day you have come earlier than usual. 20 He managed everything most prudently. 21 The children went *into* the forest. 22 He acts prudently *in* all his undertakings. 23 Let us go *into* the house. 24 Do not bring any dirt *into* the room. 25 Birds fly in the air. 26 He threw the toy *into* the well. 27 Will you put the fruit *into* the basket? 28 You are late. 29 This man does his work well. 30 Do help me. 31 Do make haste. 32 I do love her. 33 What[1] a wonderful thing is the steam engine! 34 What is steam? 35 A little boy took young bird *from* it's nest.

೧ ಅವನು ನನ್ನ ಕಡೆಯಿಂದ ಬಹಳ ರೂಪಾಯಿ ಕೈಗಡ ಇಸಕೊಂಡನು. ೨ ನಾನು ನಿನ್ನಿನಾರಭ್ಯ ಅವನಿಗೆ ಈ ಮಾತು ಕೇಳುತ್ತಿದ್ದೇನೆ. ೩ ಅಂದಿನಿಂದ ಅವನು ಅಲ್ಲಿಗೆ ತಿರುಗಿ ಹೋಗಲೇ ಇಲ್ಲ. ೪ ಆ ಕೆರೆಯಲ್ಲಿ ನಾನು ಬಹಳ ಕಮಲಗಳನ್ನು ಕಂಡೆನು. ೫ ಹುಡುಗನು ಹೊಳೆಯೊಳಗೆ ಕಲ್ಲು ಒಗೆದನು. ೬ ನಾನು ನಾಳಿನಿಂದ ನಿನಗೆ ಕಲಿಸಲಿಕ್ಕಿಲ್ಲ. ೭ ಈ ಚಹದೊಳಗೆ ಮತ್ತಿಷ್ಟು ಸಕ್ಕರೆ ಹಾಕು. ೮ ಒಬ್ಬ ಹೆಂಗಸು ಬಾವಿಯೊಳಗೆ ಬಿದ್ದಳು. ೯ ಬಂದರದಲ್ಲಿ ಬಹಳ ಹಡಗಗಳು ಬಂದಿವೆ. ೧೦ ಹುಡುಗರು ಕುದುರೆಯನ್ನು ಮನೆಯೊಳಗಿಂದ ಹೊರಗೆ ತಂದರು. ೧೧ ಯಜಮಾನನು ಆ ದುಷ್ಟ ಸೇವಕನನ್ನು ಮನೆಯ

---

1) What ಎಂಬ ಶಬ್ದವು ಆಶ್ಚರ್ಯಬೋಧಕವಿದ್ದಾಗ a ಎಂಬ ಉಪಪದವು ಅದರ ಮುಂದೆ ಬರುತ್ತದೆ.

ಹೊರಗೆ ಹಾಕಿದನು. ೧೨ ಅವನು ನನ್ನ ಚಾಕು ಕಿಡಕಿಯೊಳಗಿಂದ ಕೆಳಗೆ ಚಲ್ಲಿದನು. ೧೩ ಸಿಪಾಯಿಯರು ಅರಮನೆಯೊಳಗೆ ಹೋದರು. ೧೪ ಅಲ್ಲಿ ಅವರಿಗೆ ಏನು ಸಿಕ್ಕಿತು ? ೧೫ ನಮ್ಮ ಅತಿಥಿಗಳು ಪುಣೆಯಿಂದ ಬಂದಿದ್ದಾರೆ. ೧೬ ನೀನು ಚೀಲದೊಳಗೆ ಏನು ಇಟ್ಟೀ ? ೧೭ ಈ ಮನೆಯೊಳಗೆ ಎಷ್ಟು ಜನರಿರುತ್ತಾರೆ ? ೧೮ ಆ ಮನೆಗೆ ಒಂದು ಬಾವಿಯುಂಟು. ೧೯ ನಾವು ಬಂಡಿಯೊಳಗೆ ಕೂತೆವು. ೨೦ ಬೇಸಿಗೆಯಲ್ಲಿ ನೆಲವು ಒಣಗಿರುತ್ತದೆ. ೨೧ ಅಂದಿನಿಂದ ಅವನು ದುರ್ಮುಖ ವುಳ್ಳವನಾಗಿದ್ದಾನೆ. ೨೨ ಅವನ ಬಾಯಿಯಿಂದ ಕೆಟ್ಟ ಶಬ್ದಗಳು ಎಂದೂ ಹೊರಡುತ್ತಿದ್ದಿಲ್ಲ[1]. ೨೩ ಈ ಹುಡುಗನು ಸಾಲೆಯಿಂದ ಬಂದಿದ್ದಾನೆ. ೨೪ ಯಾಲಕ್ಕಿ ಕಾಯಿಗಳು ರುಚಿಕರವಾಗಿರುತ್ತವೆ. ೨೫ ಲವಂಗಗಳು ಬಹಳ ಉಪಯೋಗವುಳ್ಳವು. ೨೬ ಜಾಜೀಕಾಯಿಯ ಗಿಡವು ಬಹು ಚಂದ ಕಾಣು ತ್ತದೆ. ೨೭ ಒಬ್ಬ ಗೃಹಸ್ಥನೂ ಅವನ ಹೆಂಡತಿಯೂ ಬಂಡಿಯೊಳಗಿಂದ ಕೆಳಗೆ ಇಳಿದರು. ೨೮ ಇದು ದಿನದ ಹೊತ್ತಲ್ಲ. ೨೯ ನೀನು ಇಷ್ಟು ತಡಮಾಡಿ ಯಾಕೆ ಬಂದಿ ? ೩೦ ರಾಮನು ನನಗಿಂತ ತಡಮಾಡಿ ಬಂದನು.

---

## ೨೧ ನೇ ಪಾಠ.

### ಉಪಸರ್ಗಾವ್ಯಯಗಳು ( ಮುಂದೆ ಸಾಗಿದ್ದು )

### PREPOSITIONS ( *Continued* ).

೧೧೬ To ಮತ್ತು for ಎಂಬ ಅವ್ಯಯಗಳಿಂದ ಇಂಗ್ಲಿಷದಲ್ಲಿ ಚತುರ್ಥೀ ವಿಭಕ್ತಿಯಾಗುತ್ತದೆಂದು ಹಿಂದೆ ಹೇಳಿದ್ದೇವೆ. ಇನ್ನೂ ಅವುಗಳ ಬೇರೆ ಕೆಲವು ಅರ್ಥಗಳನ್ನು ಕೊಟ್ಟಿದೆ.

ಒಮ್ಮೊಮ್ಮೆ to ಎಂಬ ಅವ್ಯಯದ ಅರ್ಥವು ಹತ್ತರ, ಕಡೆಗೆ ಎಂತ ಆಗುತ್ತದೆ.

ಉದಾ:—He came to me ಅವನು ನನ್ನ ಕಡೆಗೆ ಬಂದನು.

ಒಮ್ಮೊಮ್ಮೆ to ಎಂಬದರ ಅರ್ಥವು ತನಕ ಎಂತ ಆಗುತ್ತದೆ.

---

1) Never came out of, never escaped *from.*

Some children cannot count *to* ten ಕೆಲವು ಹುಡುಗರಿಗೆ ಹತ್ತರತನಕ ಎಣಿಸಲಿಕ್ಕೆ ಬರುವದಿಲ್ಲ.

ಒಮ್ಮೊಮ್ಮೆ to ಎಂಬದು ಪರಿಣಾಮವನ್ನು ತೋರಿಸುತ್ತದೆ. ಉದಾ:—

He made war *to* his cost ಅವನು ಯುದ್ಧಮಾಡಿ ಕೇಡುಪಟ್ಟನು.

ಒಮ್ಮೊಮ್ಮೆ for ಎಂಬದರ ಭಾಷಾಂತರವು ಎಂದು, ಬದಲಾಗಿ, ಎಂತ ಆಗುತ್ತದೆ. ಉದಾ:—

I took him *for* Rama ಅವನು ರಾಮನೆಂದು ನಾನು ತಿಳಿದುಕೊಂಡೆನು.

ಇಷ್ಟು ಹೊತ್ತಿನ ವರೆಗೆ ಎಂಬ ಅರ್ಥವಿರಲಾಗಿ, for ದ ಅರ್ಥವನ್ನು ವರೆಗೆ ಎಂತ ಮಾಡಬೇಕು; ಇಲ್ಲವೆ ಅದನ್ನು ಇಟ್ಟು ಬಿಡಬಹುದು ಉದಾ:—

He travelled *for* three days ಅವನು ಮೂರು ದಿವಸಗಳ ವರೆಗೆ ( ಅಥವಾ, ಮೂರು ದಿವಸ ) ಹಾದೀ ನಡೆದನು.

೧೧೭ At ಎಂಬ ಅವ್ಯಯವು ಸ್ಥಲವಾಚಕ ನಾಮಪದದ ಹಿಂದೆ ಇರಲಾಗಿ, ಅದರ ಅರ್ಥವು ಸಪ್ತಮೀ ವಿಭಕ್ತಿಯಂತೆ, ಇಲ್ಲವೆ ಹತ್ತರ ಎಂತ ಆಗುತ್ತದೆ. ಉದಾ:—

In the summer he lives *at* Mahabaleshwar ಬೇಸಿಗೆಯಲ್ಲಿ ಅವನು ಮಹಾಬಳೇಶ್ವರದಲ್ಲಿರುತ್ತಾನೆ.

I saw him *at* the gate ನಾನು ಅವನನ್ನು ಹೆಬ್ಬಾಗಿಲ ಹತ್ತರ ಕಂಡೆನು.

☞ At ಎಂಬ ಅವ್ಯಯವು ಪ್ರಾಂತದ ಅಥವಾ ದೇಶದ ಹೆಸರಿನ ಹಿಂದೆ ಬರುವದಿಲ್ಲ.

ಇಂಥಲ್ಲಿ ಎಂಬ ಅರ್ಥವಿರಲಾಗಿ ದೊಡ್ಡ ಪಟ್ಟಣದ ಹೆಸರಿನ ಹಿಂದೆ in ಎಂಬ ಅವ್ಯಯವನ್ನೂ, ಸಣ್ಣ ಊರಿನ ಹೆಸರಿನ ಹಿಂದೆ at ಎಂಬದನ್ನೂ ಪ್ರಯೋಗಿಸಬೇಕು. ಉದಾ:—

He is *in* London, but his brother is *at* Dover ಅವನು ಲಂಡನ್ ಪಟ್ಟಣದಲ್ಲಿದ್ದಾನೆ, ಆದರೆ ಅವನ ತಮ್ಮನು ಡೋವರ್‌ದಲ್ಲಿದ್ದಾನೆ.

To land ಹಡಗಿನಿಂಧ ಇಳಿ ಎಂಬ ಕ್ರಿಯಾಪದದ ಮುಂದೆ ಬಹುತರವಾಗಿ at ಎಂಬ ಅವ್ಯಯವು ಬರುತ್ತದೆ. ಉದಾ:—

He landed *at* Karwar ಅವನು ಕಾರವಾರದಲ್ಲಿ ಹಡಗಿನಿಂದಿಳಿದನು.

ಇಂಗ್ಲಿಷದಲ್ಲಿ ಕೆಲವು ಕ್ರಿಯಾಪದಗಳ ಮುಂದೆ at, in, on, over, out, up ಮುಂತಾದ ಉಪಸರ್ಗಾವ್ಯಯಗಳು ಬರಲು, ಆ ಕ್ರಿಯಾಪದದ ಅರ್ಥವು ತೀರ ಭಿನ್ನವಾಗುತ್ತದೆ. ಉದಾ:—

Get ಸಂಪಾದಿಸು; Get *up*, ಏಳು, Get at ಮುಟ್ಟು. Get *on* ಸಾಗು.

Bring ತಾ. Bring *up* ಸಾಕಿ ಸಲಹು, ವಿದ್ಯಾ ಬುದ್ಧಿ ಕಲಿಸು.

Bring *about* ಸಾಧಿಸು, ಕೈಗೂಡುವಂತೆ ಮಾಡು. Bring forth ಹಡಿ, ಹೆರು.

Make ಮಾಡು. Make *out* ತಿಳಿದುಕೊಳ್ಳು, ಅರ್ಥಮಾಡು.

Make *over* ಒಪ್ಪಿಸು. Make *up* ಪೂರೈಸು, ಭರತಿ ಮಾಡು.

Fall ಬೀಳು. Fall *under* ಒಳಗೆ ಬರು. Fall *upon* ಅಡರು.
Fall *out with* ಮೇಲೆ ಸಾಗಿ ಹೋಗು, ಜಗಳ ಮಾಡು.

Put ಹಾಳು, ಇಡು; Put *out* ನೊಂದಿಸು, ಆರಿಸು. Put *on* ಧರಿಸು.
Put *up* ೧ ಇಳಕೊಳ್ಳು, ತಂಗು; ೨ ಹುಂಡುಂಬಿಸು.

೧೧೮ ಸಪ್ತಮಿಯ ಅರ್ಥವಿರಲಾಗಿ ವೇಳೆಯ ಬೇರೆ ಬೇರೆ ವಿಭಾಗಗಳಲ್ಲಿ ದಿವಸದ ಹಿಂದೆ on, ದಿವಸಕ್ಕಿಂತ ದೊಡ್ಡ ವಿಭಾಗದ ಹಿಂದೆ in, ಸಣ್ಣ ವಿಭಾಗದ ಹಿಂದೆ at ಎಂಬ ಅವ್ಯಯಗಳು ಬರುತ್ತವೆ. Morning ಮುಂಜಾನೆ, evening ಸಂಜೆ, after-noon ಇಳಿ ಹೊತ್ತು ಎಂಬವು ದಿವಸಕ್ಕಿಂತ ಸಣ್ಣ ವಿಭಾಗಗಳಿದ್ದಾಗ್ಯೂ ಅವುಗಳ ಹಿಂದೆ in ಬರುತ್ತದೆ. ಉದಾ:—

| | |
|---|---|
| *On* monday | ಸೋಮವಾರ ದಿವಸ. |
| *In* the month of March | ಮಾರ್ಚ ತಿಂಗಳಲ್ಲಿ. |
| *In* A. D. 1881 | ಇ. ಸ. ೧೮೮೧ ರಲ್ಲಿ. |
| *At* seven o'clock | ಏಳು ಗಂಟೆಗೆ. |
| *At* noon | ಮಧ್ಯಾಹ್ನಕ್ಕೆ. |
| *At* dawn ಅಥವಾ day-break | ಬೆಳಗು ಮುಂಜಾನೆ, ನಸುಕಿನಲ್ಲಿ. |
| *In* the morning | ಬೆಳಗೆ. |
| *In* the after-noon | ಇಳಿಹೊತ್ತಿಗೆ, ಮಧ್ಯಾಹ್ನದ ಮೇಲೆ. |

☞ ಆದರೆ ಕಾಲವಾಚಕ ನಾಮಪದದ ಹಿಂದೆ ಒಂದು ವಿಶೇಷಣವಾಗಲಿ ಸರ್ವನಾಮವಾಗಲಿ ಇದ್ದು, ಅದರಿಂದ ವೇಳೆಯ ಪರಿಣಾಮವು ಅಂದರೆ ಯಾವಾಗ ಅಥವಾ ಎಷ್ಟು ಹೊತ್ತಿನವರೆಗೆ ಎಂಬದು ಸ್ಪಷ್ಟವಾಗಿ ತಿಳಿಯುತ್ತಿದ್ದರೆ, ಅವ್ಯಯವು ಬಹುತರ ಬೇಕಾಗುವದಿಲ್ಲ. ಆಗ ಕಾಲವಾಚಕ ನಾಮಪದವನ್ನು ದ್ವಿತೀಯಾ ವಿಭಕ್ತಿಯಲ್ಲಿಟ್ಟರೆ ಆಯಿತು. ಇಂಥ ನಾಮಪದಕ್ಕೆ ಇಂಗ್ಲಿಷ ವ್ಯಾಕರಣದಲ್ಲಿ Accusative of time ಕಾಲಾರ್ಥಕ ದ್ವಿತೀಯಾ ಅನ್ನುತ್ತಾರೆ. ಉದಾ:

I will see you *next* Monday ನಾನು ಬರುವ ಸೋಮವಾರ ದಿವಸ ನಿಮಗೆ ಭೆಟ್ಟಿಯಾಗುವೆನು.

We had no leave *last* year on this day ಹೋದ ವರುಷ ಈ ಹೊತ್ತು ನನಗೆ ರಜಾ ಇದ್ದಿಲ್ಲ.

He lived here ( for) *two* days ಅವನು ಇಲ್ಲಿ ಎರಡು ದಿವಸ ಇದ್ದನು.

He will pass the examination this year ಈ ವರುಷ ಅವನ ಪರೀಕ್ಷೆ ಇಳಿಯುವದು.

ಇದೇ ಮೇರೆಗೆ ಅಂತರವನ್ನಾಗಲಿ ಅಳತೆಯನ್ನಾಗಲಿ ಹೇಳುವದಾದರೆ, ಬರೇ ದ್ವಿತೀಯೆಯನ್ನು ಪ್ರಯೋಗಿಸಬೇಕು. ಅದಕ್ಕೆ ಪರಿಮಾಣಾರ್ಥಕ ದ್ವಿತೀಯಾ ಅನ್ನುತ್ತಾರೆ. ಉದಾ:—

That village is *five miles* (distant) from this place ಆ ಹಳ್ಳಿಯು ಇಲ್ಲಿಂದ ಐದು ಮೈಲು (ದೂರ) ಅದೆ.

The cloth is *four yards* wide ಆ ಅರಿವೆ ನಾಲ್ಕು ಗಜ ಅಗಲವದೆ.

೧೧೯ Of ಎಂಬ ಅವ್ಯಯದ ಭಾಷಾಂತರವನ್ನು ಒಮ್ಮೊಮ್ಮೆ 'ಎಂಬ' ಈ ಶಬ್ದದಿಂದ ಮಾಡಬೇಕಾಗುತ್ತದೆ. ಹೀಗೆ ನಡುಗಡ್ಡೆ, ಪಟ್ಟಣ, ಊರು ಹಳ್ಳಿಗಳ ಹೆಸರುಗಳ ಬಗೆಗೆ ಮಾತ್ರ ಪ್ರಯೋಗಿಸಬಹುದು. ಆದರೆ ನದಿಗಳ ಹೆಸರುಗಳ ವಿಷಯದಲ್ಲಿ of ಎಂಬದನ್ನು ಪ್ರಯೋಗಿಸಲಾಗದು.

ಉದಾ: The island *of* Sumatra ಸುಮಾತ್ರಾ ಎಂಬ ನಡುಗಡ್ಡೆ.
The city *of* Vijayanagar ವಿಜಯನಗರವೆಂಬ ಪಟ್ಟಣ.
ಆದರೆ The river Krishna ಕೃಷ್ಣಾ ನದಿ.

## ೧೨೬ ಶಬ್ದಸಂಗ್ರಹ ೨೧.

An of'fice ೧ ಅಧಿಕಾರ,ಹುದ್ದೆ; ೨ ಕಚೇರಿ. Near'ly ಸಲ್ಪ ಹೆಚ್ಚುಕಡಿಮೆ,ಸುಮಾರು.
A post'-of'fice ಟಪಾಲಕಚೇರಿ,ಅಂಚೆಕಟ್ಟೆ. To rise ೧ಏಳು; ೨ಮೂಡು; ೩ ಹುಟ್ಟು.

| | | | |
|---|---|---|---|
| A church[1] | ಕ್ರೈಸ್ತರ ಗುಡಿ. | To car'ry | ಒಯ್ಯು, ತೆಗೆದುಕೊಂಡು ಹೋಗು. |
| A gaol, Jail (ಜೇಲ್) | ಸೆರೆಮನೆ, ಬಂದೀಖಾನೆ | To pur'chase | ಕೊಂಡುಕೊಳ್ಳು, ಕ್ರಯಕ್ಕೆ ತಕ್ಕೊಳ್ಳು. |
| A pair | ಜೋಡು, ದ್ವಯ; ಯುಗ್ಮ. | To found | ಸ್ಥಾಪಿಸು. |
| An ar'my | ಸೈನ್ಯ, ದಂಡು. | Dawn | ನಸಕು,ಅರುಣೋದಯ. |
| Trouble | ತೊಂದರೆ, ಪೇಚಾಟ, ಶ್ರಮ. | Day'break | ನಸಕು,ಅರುಣೋದಯ. |
| Se'rvice, A service | ಸೇವೆ, ಕೆಲಸ. | A fam'ine | ಬರ, ದುರ್ಭಿಕ್ಷ. |
| | | A pain | ನೋವು. |
| A nov'el | ಕಲ್ಪಿತ ಕತೆ, ಕಾದಂಬರಿ. | Pains | ಕಷ್ಟ, ಶ್ರಮ, ದಾವತಿ. |
| A foot | ಪಾದ, ಅಡಿ, ಫೂಟು. | A sort, a kind | ತರ, ಬಗೆ, ಜಾತಿ, ಪ್ರಕಾರ. |
| Sun'set | ಸೂರ್ಯಾಸ್ತ. | A lim'it | ಗಡಿ, ಮೇರೆ, ಸೀಮೆ. |
| A week[2] | ವಾರ, ಸಪ್ತಕ. | A boundry | ಗಡಿ, ಮೇರೆ, ಸೀಮೆ. |
| De-par'ture | ಹೊರಡೋಣ, ನಿರ್ಗಮನ. | At all, In the least | ರವಷ್ಟಾದರೂ, ತೀರ, ಅಗದೀ. ಎಳ್ಳಷ್ಟಾದರೂ. |
| To de-li'ver | ೧ ಬಿಡುಗಡೆ ಮಾಡು; ೨ ಕೈಯಲ್ಲಿ ಕೊಡು. | At least | ಏನಿಲ್ಲೆಂದರೂ, ಕನಿಷ್ಠ ಪಕ್ಷಕ್ಕೆ. |
| Price | ಬೆಲೆ, ಕ್ರಯ, ಕಿಮ್ಮತ್ತು. | Forty | ನಾಲ್ವತ್ತು. |
| To re-mai'n | ಉಳಿ, ನಿಲ್ಲು, ಇರು | ವಾಯವ್ಯ | the north'west. |

1) ಕ್ರೈಸ್ತರ ಗುಡಿಯ ಹೊರ್ತು ಉಳಿದ ಯಾವತ್ತು ಹಿಂದು ಜನರ ಗುಡಿಗಳಿಗೆ temples ಅನ್ನಬೇಕು; ಮುಸಲ್ಮಾನರ ಗುಡಿಗೆ mosque, ಯಹುದೀಯರ ಗುಡಿಗೆ synagogue ಅನ್ನಬೇಕು.

2) ನಮ್ಮಂತೆ ಇಂಗ್ಲಿಷ ಜನರೊಳಗೆ ವಾರ ಅಂದರೆ ಆದಿತ್ಯವಾರದಾರಭ್ಯ ಶನಿವಾರದ ವರೆಗೆ ಏಳು ದಿವಸಗಳು. ವಾರಗಳ ಹೆಸರುಗಳು Sunday ಆದಿತ್ಯವಾರ, Monday ಸೋಮವಾರ, Tuesday ಮಂಗಳವಾರ, Wednesday ಬುಧವಾರ, Thursday ಬ್ರಹಸ್ಪತಿವಾರ, Friday ಶುಕ್ರವಾರ, Saturday ಶನಿವಾರ. ದಿವಸಗಳ ಆರಂಭದಲ್ಲಿ ದೊಡ್ಡ ಅಕ್ಷರ ಬರೆಯಬೇಕು.

| | | | |
|---|---|---|---|
| ಸಂಕಟ, ಅಡಚಣೆ | a dif'ficulty. | ಸ್ವಗೃಹ, ಮನೆ | a home[1]. |
| ಪ್ರಾಂತ, ನಾಡು | prov'ince. | ಪೇಟೆ | a mar'ket. |
| ಇಲಾಖೆ | a pres'i-den-cy. | ಕಾರಣ | a cause, a rea'son. |
| ದಾಲಚಿನ್ನಿ | cin'na-mon. | ಹೆಜ್ಜೆ ಇಡು | to step. |
| ದುರ್ಬಲ, ಬಲಹೀನ | weak, ef-fem'in-ate. | ಸಹಿಸು, ಅನುಭವಿಸು | to suf'fer. |
| ಮನೆ ಮಾಡಿಕೊಂಡಿರು, ತಳವೂರು, ವಾಸವಾಗಿರು | to set'tle. | ಹೊಸ್ತಿಲು | a thresh'old. |

## ಭಾಷಾಂತರಪಾಠ ೨೧.

೧೨೧. 1 *At* what hour shall I come? 2 He holds his office *for* life. 3 Will you take this letter *for* me *to* the post-office? 4 He goes *to* church *on* Sundays. 5 The young physician is rising *to* wealth and honour. 6 My servant brought the stranger *to* me. 7 They carried the prisoners *to* the gaol. 8 I sent him a present. 9 I have received no letter from you since your departure from this town. 10 Have you sent any letter *to* our friend lately? 11 He received no reward from you *for* his former service. 12 We travelled *for* many months. 13 I purchased this horse *for* a large sum of money. 14 *For* how much did you purchase this novel? 15 What did you pay *for* this pair of shoes[2]? 16 What did this

1) ಯಾವನೊಬ್ಬ ಮನುಷ್ಯನು ತಾನು ಇರುವ ಮನೆಗೆ ತನ್ನ home ಅನ್ನುತ್ತಾನೆ. ಗಮನಾರ್ಥಕ ಕ್ರಿಯಾಪದಗಳ ಮುಂದೆ ಬರೀ home ಎಂಬದು ಬಂದರೆ, ಅದರ ಅರ್ಥ ಮನೆಗೆ, ಮನೆಯ ಕಡೆಗೆ, ಸ್ವಗೃಹಕ್ಕೆ ಎಂತ ಆಗುತ್ತದೆ. ಉದಾ:—He went home ಅವನು ಮನೆಗೆ ಹೋದನು. ಸ್ಥಿತಿವಾಚಕ ಕ್ರಿಯಾಪದಗಳ ಮುಂದೆ 'ಮನೆಯಲ್ಲಿ' 'ಮನೆಯೊಳಗೆ' ಎಂಬದಕ್ಕೆ at home ಅನ್ನುತ್ತಾರೆ. ಉದಾ:—He is at home ಅವನು ಮನೆಯಲ್ಲಿದ್ದಾನೆ. 2) pair of shoes = ಮೆಟ್ಟು ಜೋಡು.

pair of shoes cost you? 17 *At*[1] what price did you buy this oil? 18 I bought this pair of bullocks *for* forty rupees. 19 What did you see *in* the island of Ceylon? 20 *For* whom are you taking all this trouble? 21 We grieve *at* the loss of friends. 22 The two armies met at Panipat. 23 Romulus founded the city *of* Rome. 24 We will go out *at* sunset. 25 The merchant then went *to* England and lived *at* Liverpool. 26 We remained *at* Sholapur for three weeks. 27 I am *at* your service[2]. 28 The children are going *to* school. 29 That room is ten feet long, eight feet wide and seven feet high. 30 What is the depth of that well? 31 We get good tea from China, Assam and Kangra[3] valley. 32 Coffee comes from Coorg and Wynaad[4]. 33 I fell *at* his feet. 34 He repaired it at my expense. 35 It is seven o'clock *by* my watch.

೧. ನನಗೆ ಮುಂದಿನ ಆಧಿತ್ಯವಾರ ಬೆಟ್ಟಿಯಾಗು[5]. ೨ ಹೋದ ವರುಷ ಈ ನಾಡಿಗೆ ಬಹಳ ಮಳೆ[6] ಆಯಿತು. ೩ ಮುಂಬಯಿಯಲ್ಲಿ ಪ್ರತಿ ವರುಷ ಎಷ್ಟು ಮಳೆ ಬೀಳುತ್ತದೆ? ೪ ಅವನು ಪ್ರತಿ ಶನಿವಾರಕ್ಕೆ ನಮ್ಮ ಮನೆಗೆ ಬರುತ್ತಾನೆ. ೫ ನಿನ್ನೆ ಬೆಳಗ್ಗೆ ನೀನು ಉಣ್ಣಲಿಲ್ಲ. ೬ ನೀವು ಈ ಹೊತ್ತು ಸಾಯಂಕಾಲಕ್ಕೆ[7] ಇಲ್ಲಿ ಬನ್ನಿ. ೭ ನಾನು ಮಧ್ಯಾಹ್ನದಲ್ಲಿ ಹೊರಗೆ ಹೋಗುವೆನು. ೮ ಈ ವರುಷ ಬಂಗಾಲ ಇಲಾಖೆಯಲ್ಲಿ ಬಹಳ ಮಳೆ ಬಿತ್ತು. ೯ ಉತ್ತರ ಹಿಂದುಸ್ತಾನದ ಜನರು ಬಹುತರ ಶೂರರಿರುತ್ತಾರೆ. ೧೦ ಕೆಲವು ಪ್ರಾಂತಗಳೊಳಗಿನ ಜನರು ಬಲಹೀನರು. ೧೧ ಇದಕ್ಕೆ ಕಾರಣವೇನು? ೧೨ ಸಿಂಧು ನದಿಯು[8] ಹಿಂದುಸ್ತಾನದ[9] ವಾಯುವ್ಯ ಸೀಮೆಯಾಗಿದೆ.

---

1) ಧಾರಣೆ ಹೇಳುವಾಗ at ಎಂಬದನ್ನು ಪ್ರಯೋಗಿಸುತ್ತಾರೆ. 2) ನೀವು ಹೇಳಿದ ಕೆಲಸ ಮಾಡಲಿಕ್ಕೆ ನಾನು ಸಿದ್ಧನಿದ್ದೇನೆ. 3) ಇದು ಪಂಜಾಬ ಇಲಾಖೆಯಲ್ಲಿ ಬಿಯಾಸಾ ನದಿಯ ಧಡದ ಹತ್ತರ ಉಂಟು 4) ಮದ್ರಾಸ ಇಲಾಖೆಯಲ್ಲಿ ಸಹ್ಯಾದ್ರಿ ಪರ್ವತಕ್ಕೆ ಹೊಂದಿರುವ ಒಂದು ಗುಡ್ಡಗಾಡು ಪ್ರದೇಶ. 5) ಭೆಟ್ಟಿಯಾಗು = to see. 6) ಬಹಳ ಮಳೆ = a great deal of rain, heavy rain. 7) This evening. 3) ಸಿಂಧೂ ನದಿ = the river Indus. 9) ಹಿಂದುಸ್ಥಾನ = India.

೧೩ ಕೆಲವು ಇಂಗ್ಲಿಷ ಜನರು[1] ಹಿಂದು ದೇಶದಲ್ಲಿ ಮನೆಮಾಡಿಕೊಂಡಿದ್ದಾರೆ. ೧೪ ನಾನು ಅವರನ್ನು ಹೋದ ತಿಂಗಳು ಪುಣೆಯಲ್ಲಿ ಕಂಡೆನು. ೧೫ ಮಳೆಗಾಲದಲ್ಲಿ ಅವನು ಕಲಕತ್ತೆಯಲ್ಲಿರುತ್ತಾನೆ. ೧೬ ಅವನು ಸಿಂಹಲದ್ವೀಪದಲ್ಲಿ[2] ಎರಡು ತಿಂಗಳು ನಿಂತಿದ್ದನು. ೧೭ ಸಿಂಹಲದ್ವೀಪದಲ್ಲಿ ದಾಲಚಿನ್ನಿಯ ಗಿಡಗಳು ಹೇರಳವಾಗಿ ಬೆಳೆಯುತ್ತವೆ. ೧೮ ನಾನು ಹೋದ ತಿಂಗಳಲ್ಲಿ ಬೆಳಗಾಂವಿಯಲ್ಲಿದ್ದೆನು. ೧೯ ಹೋದ ವರುಷ ನಾನು ಮುಂಬಯಿ ಪಟ್ಟಣವನ್ನು ನೋಡಿದೆವು. ೨೦ ನನ್ನ ಎಷ್ಟೋ ಜನ ಸ್ನೇಹಿತರು ಪುಣೆ ಪಟ್ಟಣದಲ್ಲಿದ್ದಾರೆ. ೨೧ ನನಗೆ ಆ ಗೃಹಸ್ಥನು ಅರಮನೆಯ ಬಾಗಿಲಲ್ಲಿ ಭೆಟ್ಟಿಯಾದನು. ೨೨ ನೀವು ಬೇಸಿಗೆಯಲ್ಲಿ ಮಹಾಬಳೇಶ್ವರಕ್ಕೆ ಯಾಕೆ ಹೋಗಲಿಲ್ಲ ? ೨೩ ನಿನ್ನ ಸಲುವಾಗಿ ನಾನು ಬಹಳ ಸಂಕಟಗಳನ್ನ ಅನುಭವಿಸಿದೆನು. ೨೪ ಸೈನ್ಯವು ಬಡೋದೆಗೆ ಹೋಗಿತು. ೨೫ ಹೋದವಾರ ನಾನು ಹೊಸ್ತಿಲ ಹೊರಗೆ ಹೆಜ್ಜೆ ಇಡಲಿಲ್ಲ. ೨೬ ಅವನ ಶಿಕ್ಷಕನು ದಿನಾಲು ಬೆಳಿಗ್ಗೆ ಬರುತ್ತಾನೆ. ೨೭ ನಾವು ಬೆಳಿಗ್ಗೆ ಸ್ನಾನ ಮಾಡುತ್ತೇವೆ. ೨೮ ಆ ಮೇಲೆ ನಾವು ಮನೆಗೆ ಬಂದೆವು. ೨೯ ಅವನು ಮನೆಯಲ್ಲಿದ್ದಾನೆ. ೩೦ ಅವನು ತನ್ನ ಮನೆಗೆ ಹೋದನು. ೩೧ ನಾನು ಮನೆಯಲ್ಲಿರುವೆನು. ೩೨ ಆಕೆಯು ತನ್ನ ಮನೆಯಲ್ಲಿದ್ದಾಳೆ. ೩೩ ನಿಮ್ಮ ಮಗನು ನಮ್ಮ ಮನೆಯಲ್ಲಿದ್ದಾನೆ. ೩೪ ನಿಮ್ಮ ಮನೆಗೆ ಯಾವ ಅಭ್ಯಾಗತರು ಬಂದಿದ್ದಾರೆ ? ೩೫ ಪೇಟೆಗೆ ಹೋಗು. ೩೬ ಈ ಪೆಟ್ಟಿಗೆಗೆ ನಿಮಗೆ ಕನಿಷ್ಠಪಕ್ಷಕ್ಕೆ ಐದು ರೂಪಾಯಿ ಬೀಳುವದು. ೩೭ ನಾನು ಈ ಪೆಟ್ಟಿಗೆಗೆ[3] ಏನಿಲ್ಲೆಂದರೂ ಐದು ರೂಪಾಯಿ ತಕ್ಕೊಳ್ಳುವೆನು. ೩೮ ಈ ಪೆಟ್ಟಿಗೆಯು ನಿಮಗೆ ಐದು ರೂಪಾಯಿಯ ಕೆಳಗೆ[4] ಸಿಗಲಿಕ್ಕಿಲ್ಲ. ೩೯ ಕೆಲವು ಹಿಂದೂ ಜನರು ಇಂಗ್ಲಂಡಕ್ಕೆ[5] ಹೋಗಿದ್ದಾರೆ. ೪೦ ನೀನು ಆ ಕಾಲಕ್ಕೆ[6] ಎಲ್ಲಿ ಇದ್ದಿ ?

1) ಕೆಲವು ಇಂಗ್ಲಿಷ ಜನರು = Some Englishmen. 2) ಸಿಂಹಲ=Ceylon.
3) For this box. 4) Under five, for less than five.
5) ಇಂಗ್ಲಂಡ = England. 6) At the time ಅಥವಾ at that time.



## ೨೨ ನೇ ಪಾಠ.

### ಉಪಸರ್ಗಾವ್ಯಯಗಳು ( ಮುಂದೆ ಸಾಗಿದ್ದು. )

### Prepositions ( Continued ).

೧೩೨ ಮೇಲೆ ಹೇಳಿದ ಉಪಸರ್ಗಾವ್ಯಯಗಳ ಹೊರ್ತು ಬೇರೆ ಅನೇಕ ಉಂಟು. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಕೊಟ್ಟಿದ್ದೇವೆ.

**On, upon, above, over, below, beneath, under after, behind before, about, round, around, among, amongst, amid, amidst, between, during, along, beside, besides, without[1], except, across, beyond, through, concerning, respecting, toward, towards, with[2], by, instead of, against.**

೧೩೩ On, Upon ಎಂಬ ಅವ್ಯಯಗಳಿಂದ ಮುಖ್ಯವಾಗಿ ಹೊಂದಿ ಮೇಲ್ಭಾಗದಲ್ಲಿರೋಣ ಎಂಬ ಅರ್ಥವಾಗುತ್ತದೆ[3]. ಉದಾಃ

The book is *on* the table ಪುಸ್ತಕವು ಮೇಜಿನ ಮೇಲೆ ಅದೆ.

ಒಮ್ಮೊಮ್ಮೆ on, upon ಎಂಬವು ವೇಳೆಯನ್ನು ತೋರಿಸುತ್ತವೆ. ಉದಾಃ-

He went *on* Saturday ಅವನು ಶನಿವಾರ ಹೋದನು.
Once *upon* a time ಒಂದಾನೊಂದು ಸಮಯದಲ್ಲಿ.

ಒಮ್ಮೊಮ್ಮೆ ನಂಬಿಗೆಯನ್ನು ತೋರಿಸುತ್ತದೆ. ಉದಾಃ

*Upon* my word } ಆಣೆ ಮಾಡಿ, ಪ್ರಮಾಣಪೂರ್ವಕ, ನಿಜವಾಗಿ.
*On* my word }

1) ಈ ಶಬ್ದದಲ್ಲಿ th ದ ಉಚ್ಚಾರವು ದ್ ಆಗುತ್ತದೆ.
2) ಇದರೊಳಗಿನ th ದ ಉಚ್ಚಾರವು ಥ್ ಆಗುತ್ತದೆ.
3) On, upon ಎಂಬವುಗಳ ಅರ್ಥವು ಬಹುತರ ಒಂದೇ; ಆದರೆ ಈಗ upon ಕ್ಕಿಂತ on ವನ್ನು ಉಪಯೋಗಿಸುವದು ಬಹಳ.

Above ಎಂಬ ಅವ್ಯಯದ ಅರ್ಥಗಳು ಎರಡು; ೧ ಎತ್ತರವಾಗಿ, ಮೇಲೆ; ೨ ಶ್ರೇಷ್ಠವಾದ ಅಥವಾ ಹೆಚ್ಚಿನ. ಉದಾ:—

The sky is *above* our heads ಆಕಾಶವು ನಮ್ಮ ತಲೆಯ ಮೇಲೆ ಅದೆ.

The Collector is *above* the Mamlatdar ಕಲೆಕ್ಟರನು ಮಾಮಲೇದಾರನ ಮೇಲೆ ಇದ್ದಾನೆ; ಅಂದರೆ ಮಾಮಲೇದಾರನಿಗಿಂತ ಶ್ರೇಷ್ಠನು—ಹೆಚ್ಚಿನವನು.

The weight is *above* a seer ತೂಕವು ಒಂದು ಸೇರಿನ ಮೇಲೆ ಅದೆ.

Over ಎಂಬ ಅವ್ಯಯದ ಅರ್ಥಗಳು ನಾಲ್ಕು:—೧ ಎತ್ತರವಾಗಿ, ಮೇಲೆ; ೨ ಶ್ರೇಷ್ಠತ್ವ; ೩ ಆಚೆಯ ಕಡೆಗೆ; ೪ ಮುಗಿಯೋಣ. ಉದಾ:—

The servant holds an umbrella *over* his master ಆಳು ತನ್ನ ಒಡೆಯನ ಮೇಲೆ ಕೊಡೆ ಹಿಡಿಯುತ್ತಾನೆ.

I will make you a ruler *over* many nations. ನಾನು ನಿನ್ನನ್ನು ಅನೇಕ ಜನಾಂಗಗಳ ಮೇಲೆ ಅಧಿಪತಿಯನ್ನಾಗಿ ಮಾಡುವೆನು.

He jumped *over* the wall ಅವನು ಗೋಡೆ ಜಿಗಿದನು
The lesson is *over* ಪಾಠವು ಮುಗಿಯಿತು.

೧೨೪ Under, below, beneath ಎಂಬ ಅವ್ಯಯಗಳ ಅರ್ಥಗಳು:—೧ ಕೆಳಗೆ; ೨ ಕಡಿಮೆ ಯೋಗ್ಯತೆಯುಳ್ಳ ಎಂದು ಆಗುತ್ತವೆ. ಇವು on, upon, over, above ಎಂಬ ಶಬ್ದಗಳಿಗೆ ವಿರೋಧವಾದ ಅರ್ಥವುಳ್ಳವು.

ಉದಾ:—He stood *under* a tree ಅವನು ಗಿಡದ ಕೆಳಗೆ ನಿಂತನು.

I will not sell it *under* ten rupees.
ಹತ್ತು ರೂಪಾಯಿಗಳ ಕೆಳಗೆ ನಾನು ಅದನ್ನು ಮಾರಲಿಕ್ಕಿಲ್ಲ.

We found a scorpion *beneath* the stone.
ನಾವು ಕಲ್ಲಿನ ಕೆಳಗೆ ಚೇಳು ಕಂಡೆವು.

It is *beneath you* ಅದು ನಿನಗೆ ತಕ್ಕದ್ದಲ್ಲ—ಸಲ್ಲದ್ದು.

Clouds are *below* the stars ಮೇಘಗಳು ನಕ್ಷತ್ರಗಳ ಕೆಳಗೆ ಇರುತ್ತವೆ.

He is always *below* me in the class.
ಅವನು ವರ್ಗದಲ್ಲಿ ಯಾವಾಗಲೂ ನನ್ನ ಕೆಳಗೆ ಇರುತ್ತಾನೆ.

೧೨೫ After, behind = ಹಿಂದೆ, ಹಿಂಭಾಗದಲ್ಲಿ. ಆದರೆ ಹಿಂಭಾಗಕ್ಕೆ ಹೊಂದಿ ಎಂಬ ಅರ್ಥವಿರಲಾಗಿ ಬಹುತರ behind ಎಂಬದನ್ನು ಪ್ರಯೋಗಿಸುತ್ತಾರೆ. After ಎಂಬದರ ಅರ್ಥವು ಆ ಮೇಲೆ, ಅನಂತರ, ತರುವಾಯ ಎಂತ ಸಹ ಆಗುವದುಂಟು. ಉದಾ:—

He stood *behind* me ಅವನು ನನ್ನ ಹಿಂಭಾಗದಲ್ಲಿ ನಿಂತನು.
He came *after* me ಅವನು ನನ್ನ ತರುವಾಯ ಬಂದನು.
I went out *after* dinner ಊಟ ಆದ ಮೇಲೆ ನಾನು ಹೊರಗೆ ಹೋದೆನು.

೧೨೬ **Before** = ೧ ಮುಂದೆ; ೨ ಮುಂಚೇ[1]. ಉದಾ: -

Stand *before* me ನನ್ನ ಮುಂದೆ ನಿಲ್ಲು
I got up *before* sunrise ನಾನು ಸೂರ್ಯೋದಯಕ್ಕಿಂತ ಮುಂಚೆ ಎದ್ದೆನು.

೧೨೭ About, round, around = ಸುತ್ತಲು, ಸುತ್ತುಮುತ್ತಲು. about ದ ಎರಡನೇ ಅರ್ಥಗಳು— ೧ ಸುಮಾರು; ೨ ವಿಷಯವಾಗಿ.

ಉದಾ—The country *about* the mouths of Indus is unhealthy ಸಿಂಧು ನದಿಯ ಮುಖಗಳ ಸುತ್ತುಮುತ್ತಲಿನ ಪ್ರದೇಶವು ರೋಗವುಳ್ಳದ್ದು.

---

1) Before 'ಎಂಬದರ ಅರ್ಥವು 'ಸಮಕ್ಷ' 'ಕಣ್ಣೆದುರಿಗೆ' ಎಂತ ಸಹ ಆಗುತ್ತದೆ. He came *before* me; ಈ ವಾಕ್ಯದಿಂದ ಎರಡು ಅರ್ಥಗಳಾಗಬಹುದು. ಅವನು ನನಗಿಂತ ಮುಂಚೆ ಬಂದನು; ೨ ಅಪನು ನನ್ನ ಸಮಕ್ಷ ಬಂದನು. ಈ ಪ್ರಕಾರ ಒಂದು ಶಬ್ದಕ್ಕೆ ಬೇರೆ ಬೇರೆ ಅರ್ಥಗಳಿದ್ದಾಗ ಅದು ಯಾವ ವಾಕ್ಯದೊಳಗೆ ಬಂದಿರುತ್ತದೋ ಆ ವಾಕ್ಯದ ಪೂರ್ವಾಪರ ಸಂಬಂಧ ನೋಡಿ ಅಲ್ಲಿ ತಕ್ಕ ಅರ್ಥವನ್ನು ಮಾಡಿಕೊಳ್ಳಬೇಕು.

The earth moves *round* the sun ಪೃಥ್ವಿಯು ಸೂರ್ಯನ ಸುತ್ತಲು ತಿರುಗುತ್ತದೆ.

The fort has a trench *around* it ಕೋಟೆಯ ಸುತ್ತಲು ಕಂದಕವದೆ.

He went out at *about* three o'clock ಅವನು ಸುಮಾರು ಮೂರು ಗಂಟೆಗೆ ಹೊರಗೆ ಹೋದನು.

What does he say *about* me ? ಅವನು ನನ್ನ ವಿಷಯಕ್ಕೆ ಏನು ಹೇಳುತ್ತಾನೆ ?

೧೨ Among, amongst[1] ಒಳಗೆ, ಮಧ್ಯಭಾಗದಲ್ಲಿ. ಉದಾ:—

*Among* these boys which is the cleverest ? ಈ ಹುಡುಗರೊಳಗೆ ಎಲ್ಲರಿಗಿಂತ ಬುದ್ಧಿವಂತನು ಯಾರು ?

He was the oldest *amongst* them ಅವರೊಳಗೆ ಅವನು ಎಲ್ಲರಿಗಿಂತ (ವಯಸ್ಸಿನಿಂದ) ದೊಡ್ಡವನಿದ್ದನು.

Amid, amidst[1] ಎಂಬ ಶಬ್ದಗಳ ಅರ್ಥಗಳಾದರೂ ಒಳಗೆ, ನಡುವೆ ಎಂದು ಆಗುತ್ತವೆ. ಉದಾಃ—

He behaved like a hero *amidst* these difficulties ಈ ಸಂಕಟಗಳಲ್ಲಿ ಅವನು ವೀರನಂತೆ ವರ್ತಿಸಿದನು.

Between = ಎರಡು ಪದಾರ್ಥಗಳ ಮಧ್ಯದಲ್ಲಿ (ನಡುವೆ). ಉದಾಃ—

The river Tweed is *between* England and Scotland ಇಂಗ್ಲಂಡಕ್ಕೂ ಸ್ಕಾಟಲಂಡಕ್ಕೂ ನಡುವೆ ಟ್ವೀಡ ನದಿಯುಂಟು.

---

1) Among ಎಂಬ ಅವ್ಯಯವನ್ನು ಬಹುತರವಾಗಿ ಒಳಗೆ ಎಂಬ ಅರ್ಥದಿಂದಲೂ, amidst ಎಂಬುದನ್ನು ನಟ್ಟನಡುವೆ ಎಂಬ ಅರ್ಥದಿಂದಲೂ ಪ್ರಯೋಗಿಸಬೇಕು. Among ದ ಮುಂದೆ ಬಹುತರ ವ್ಯಕ್ತಿವಾಚಕ ನಾಮಗಳೂ amidst ದ ಮುಂದೆ ಭಾವವಾಚಕನಾಮಗಳಾಗಲಿ ಆ ಪ್ರಕಾರದ ಬೇರೆ ನಾಮಗಳಾಗಲಿ ಬರುತ್ತವೆ. ಇದಲ್ಲದೆ, among ಎಂಬ ಅವ್ಯಯವನ್ನು ಬಹುತರ ಸಜಾತೀಯ ವ್ಯಕ್ತಿಗಳೊಳಗೆ, amidst ಎಂಬದನ್ನು ವಿಜಾತೀಯ ವ್ಯಕ್ತಿಗಳೊಳಗೆ ಎಂಬ ಅರ್ಥದಿಂದ ಪ್ರಯೋಗಿಸಬೇಕು. ಆದರೆ ಈ ಸೂಕ್ಷ್ಮವಾದ ಭೇದಗಳು ಯಾವಾಗಲೂ ಕಂಡುಬರುತ್ತವೆಂದು ಹೇಳಕೂಡದು. ಈ ಅವ್ಯಯಗಳ ಪ್ರಯೋಗಗಳು ಇಂಗ್ಲಿಷ ಪುಸ್ತಕಗಳನ್ನು ಓದುತ್ತ ಹೋದಹಾಗೆ ಚನ್ನಾಗಿ ತಿಳಿಯುವವು.

**During** = ಇಷ್ಟು ಹೊತ್ತಿನೊಳಗೆ. ಉದಾ:—

He sufferd much *during* the journey ಪ್ರವಾಸದೊಳಗೆ ಅವನು ಬಹಳ ಕಷ್ಟಬಟ್ಟನು.

We must live virtuously *during* our earthly pilgrimage ಸಂಸ್ಕಾರರೂಪ ಯಾತ್ರೆಯಲ್ಲಿ ನಾವು ನೀತಿಯಿಂದಿರಬೇಕು.

೧೪೯ **Along** ಒಂದಿಗೆ, ಗುಂಟೆ. ಉದಾ:—

The soldiers marched *along* the river ಸಿಪಾಯರು ನದಿಗುಂಟ ಕ್ರಮವಾಗಿ ಹೋದರು. ( ಕೂಚು ಮಾಡಿದರು ).

**Beside** = ಸಮೀಪ; ಹತ್ತರ, ಬಳಿಯಲ್ಲಿ. ಉದಾ: —
Sit down *beside* me ನನ್ನ ಹತ್ತರ ಕೂತುಕೋ

There was a small hut *beside* the wall of the city ಪಟ್ಟಣದ ಗೋಡೆಯ ಸಮೀಪ ಒಂದು ಸಣ್ಣ ಗುಡಿಸಲು ಇತ್ತು.

೧೫೦ **Besides** = ಅಲ್ಲದೆ, ಹೊರ್ತು, ಮತ್ತೂ, ಇಂಥಾದೊಂದು ಪದಾರ್ಥವನ್ನು ಹಿಡಕೊಂಡು ಅಥವಾ ಕೂಡಿಕೊಂಡು ಮತ್ತೂ ಎಂದು ಈ ಅವ್ಯಯದ ಅರ್ಥವಾಗುತ್ತದೆ. ಉದಾ:—

*Besides* the gain he got the honour ಲಾಭವಾದದ್ದಲ್ಲದೆ ಅವನಿಗೆ ಮಾನವೂ ಸಿಕ್ಕಿತು.

*Besides* Rama there was none ರಾಮನ ಹೊರ್ತು ಮತ್ತಾರೂ ಇದ್ದಿಲ್ಲ.

**Except, without** = ಬಿಟ್ಟು, ಹೊರ್ತು, ಇಲ್ಲದೆ. ಇವುಗಳ ಅರ್ಥವು ಇಂಥಾದೊಂದು ಪದಾರ್ಥವನ್ನು ಬಿಟ್ಟು ಅಥವಾ ಅದು ಹೊರ್ತಾಗಿ ಎಂದು ಆಗುತ್ತದೆ. ಉದಾ:—

I found everything *except* my pen-knife ನನಗೆ ನನ್ನ ಚಾಕು ಒಂದು ಬಿಟ್ಟು ಎಲ್ಲ ಜೀನಸುಗಳು ಸಿಕ್ಕವು.

Many men like to live *without* labour ಬಹಳ ಮಂದಿಗೆ ದುಡಿತವಿಲ್ಲದೆ ಇರುವದು ಬೇಕು.

೧೩೧ Across = ಮೇಲಿಂದ್ಮ, ದಾಟ, ಒಂದು ಬದಿಯಿಂದ ಮತ್ತೊಂದು ಬದಿಗೆ. ಉದಾ:—

They built a bridge *across* the river ಅವರು ನದಿಗೆ ಸೇತುವೆ ಕಟ್ಟಿದರು.

Beyond = ಆಚೆಗೆ. ಉದಾ:—

I saw a stag *beyond* the river ನಾನು ನದಿಯ ಆಚೆಗೆ ಒಂದು ಸಾರಂಗವನ್ನು ಕಂಡೆನು.

೧೩೨ Through = ೧ ಒಳಗಿಂದ, ಮುಖಾಂತರವಾಗಿ; ೨ ಇಂದ (ಕಾರಣಾರ್ಥಕ). ಉದಾ:—

The water runs *through* the pipes ನಳಗಳೊಳಗಿಂದ ನೀರು ಹರಿಯುತ್ತದೆ.

I heard it *through* him ಅವನ ಮುಖಾಂತರವಾಗಿ ನಾನು ಅದನ್ನು ಕೇಳಿದೆನು.

It happened *through* pure carelessness ಕೇವಲ ಅಜಾಗ್ರತೆಯಿಂದ ಅದು ಸಂಭವಿಸಿತು.

೧೩೩ Concerning, respecting = ಬಗ್ಗೆ, ಕುರಿತು, ವಿಷಯವಾಗಿ. ಉದಾ:—

I wrote to you *concerning* that matter ಆ ಮಾತಿನ ವಿಷಯವಾಗಿ ನಾನು ನಿನಗೆ ಬರೆದಿದ್ದೆನು.

೧೩೪ Toward, towards = ಕಡೆಗೆ. ಉದಾ:—

The troops moved *towards* the city ದಂಡು ಪಟ್ಟಣದ ಕಡೆಗೆ ನಡೆಯಿತು.

೧೩೫ With ಎಂಬ ಅವ್ಯಯದಿಂದ ಕಾರಣಾರ್ಥಕ ತೃತೀಯೆಯ ಅರ್ಥವಾಗಲಿ ಸಂಗಡ ಎಂಬ ಅರ್ಥವಾಗಲಿ ಆಗುತ್ತದೆ. By ಎಂಬದರಿಂದ

ಕನ್ನಡದೊಳಗಿನ ಕರ್ಮಣ್ಯರ್ಥಕ ಕ್ರಿಯಾಪದದ ಕರ್ತೃವಿನ ಅರ್ಥವಾಗಲಿ ಸಾಧನದ ಅರ್ಥವಾಗಲಿ ಆಗುತ್ತದೆ. ಉದಾ:—

He cut it *with* a knife ಅವನು ಅದನ್ನು ಚೂರಿಯಿಂದ ಕೊಯ್ದನು.

I shall come *with* you ನಾನು ನಿನ್ನ ಸಂಗಡ ಬರುವೆನು.

This letter is written *by* Rama ಈ ಪತ್ರವು ರಾಮನಿಂದ ಬರೆಯಲ್ಪಟ್ಟಿದೆ.

They took the country *by* force ಅವರು ಬಲಾತ್ಕಾರದಿಂದ ಈ ದೇಶವನ್ನು ತಕ್ಕೊಂಡರು.

೧೩೬. Instead of = ಬದಲಾಗಿ. Against = ವಿರುದ್ಧ. ಉದಾ:—

I gave him a new book *instead of* his old one. ಅವನ ಹಳೇ ಪುಸ್ತಕಕ್ಕೆ ಬದಲಾಗಿ ನಾನು ಅವನಿಗೆ ಒಂದು ಹೊಸ ಪುಸ್ತಕವನ್ನು ಕೊಟ್ಟೆನು.

He is *against* me ಅವನು ನನ್ನ ವಿರುದ್ಧ ಇದ್ದಾನೆ.

### ೧೩೭. ಶಬ್ದಸಂಗ್ರಹ ೨೨.

| | | | |
|---|---|---|---|
| An ea'gle | ಗರುಡಪಕ್ಷಿ. | A cas'tle[1] / A fort | ಕೋಟೆ, ದುರ್ಗ. |
| A roof | ಮೇಲ್ಮಾಡು, ತಾಟು, ಛಾವಣಿ, ಛಪ್ಪರ. | A part'ner | ಪಾಲುಗಾರ. |
| Smoke | ಹೊಗೆ. | Fire | ಬೆಂಕಿ. |
| Mist | ಮಂಜು. | Fer'tile | ಫಲದಾಯಕ, ಬೆಳೆಯುಳ್ಳ. |
| A yoke | ೧ ನೊಗ; ೨ ದಾಸ್ಯತ್ವ. | A thick'et | ಪೊದೆಯುಳ್ಳ ಕಾಡು, ಸಣ್ಣ ಸಣ್ಣ ಗಿಡಗಳ ಗುಂಪುಳ್ಳ ಕಾಡು. |
| A plain | ಬೈಲು. | A pil'low[2] | ತಲೆಗಿಂಬು. |
| A rope | ಹಗ್ಗ, ನೇಣು, ಮಿಣಿ. | A de-cree' | ತೀರ್ಪು. |
| A wind'lass | ರಾಟೆ, ಭಾರವನ್ನು ಮೇಲಕ್ಕೆ ಎತ್ತುವ ಯಂತ್ರ. | Opin'i-on | ಅಭಿಪ್ರಾಯ. |

1) ಈ ಶಬ್ದದೊಳಗಿನ t ದ ಉಚ್ಚಾರವಾಗುವದಿಲ್ಲ.

2) ಕುರ್ಚಿ ಮುಂತಾದವುಗಳ ಮೇಲೆ ಕೂಡ್ರುವದಕ್ಕಾಗಿ ಹಾಕುವ ಗಾದಿಗೆ cushion ಅನ್ನುತ್ತಾರೆ.

| | | | |
|---|---|---|---|
| Snuff | ನಾಶಿಪುಡಿ, ನಸ್ಯ. | An in'ter-est | ೧ ಹಿತಸಂಬಂಧ; ೨ ಸ್ವಾರ್ಥ; ೩ ಬಡ್ಡಿ. |
| A bur'den | ಭಾರ, ಹೊರೆ, ಒಜ್ಜೆ. | To watch | ಕಾಯು, ನೋಡುತ್ತಿರು. |
| A sur'face | ಹೊರಮೈ, ಮೇಲ್ಮೈ. | To di-vide | ಹಂಚು, ವಿಭಾಗಿಸು. |
| A rank | ೧ ಪದವಿ, ದರ್ಜೆ; ೨ ದೊಡ್ಡಸ್ತಿಕೆ. | To mur'mur | ಗುಣುಗುಟ್ಟು. |
| A line | ೧ ಪಂಕ್ತಿ, ಸಾಲು; ೨ ಗೆರೆ. | Twen'ty | ಇಪ್ಪತ್ತು. |
| The oak | ಬಾನವೃಕ್ಷ | Com-mend'a-ble | ಸ್ತುತ್ಯ, ಹೊಗಳತಕ್ಕ. |
| A stream | ಪ್ರವಾಹ, ಹಳ್ಳ. | Pub'lic | ಸಾರ್ವಜನಿಕ, ಜನತಾ ಉಪಯೋಗದ. |
| A charge | ೧ ಆರೋಪ; ೨ ವಶ; ೩ ಬೆಲೆ, ವೆಚ್ಚ. | To share | ಪಾಲು ತಕ್ಕೊಳ್ಳು. |
| Success' | ಜಯ, ಸಿದ್ಧಿ. | To sail | ಹಡಗದಲ್ಲಿ ಕೂತು ಹೋಗು ಜಲಮಾರ್ಗದಿಂದ ಹೋಗು |
| Pow'er | ಶಕ್ತಿ, ಸಾಮರ್ಥ್ಯ. | Dif'fer-ent-ly | ಬೇರೆ ರೀತಿಯಿಂದ. |
| Com-pre-hen'sion | ತಿಳಿದುಕೊಳ್ಳೋಣ, ಗ್ರಹಿಕೆ. | A rock | ಬಂಡೆ, ಕಲ್ಲು, ಅರೆ. |
| A fol'lower | ೧ ಅನುಯಾಯಿ; ೨ ಪರಿವಾರಜನ. | Sla'ver-y | ದಾಸ್ಯತ್ವ, ಅಡಿಮೆ. |
| In-ten'tion | ಉದ್ದೇಶ, ಹೇತು. | A hol'i-day | ೧ ಹಬ್ಬದ ದಿನ; ೨ ಸೂಟಿ. |
| A flock | ಹಿಂಡು, ಗುಂಪು, ಮಂದೆ. | A ball | ಚಂಡು. |
| An af-fair | ಕೆಲಸ, ಸಂಗತಿ. | Pri'ma-ry | ೧ ಮೊದಲನೆಯ; ೨ ಮೂಲ; ೩ ಮುಖ್ಯ, ಪ್ರಾಥಮಿಕ. |

| | | | |
|---|---|---|---|
| ಕಂದಕ, ಅಗಳ್ತಿ | a moat, a trench. | ಇಚ್ಛೆ, ಮನೋರಥ | wish. |
| ಬಾಕು, ಬೆಂಚು | a bench. | ದ್ವಾರಪಾಲಕ, ಹವಾಲ | a port'er. |
| ದಸ್ತೈವಜ | a doc'ument. | ಉನ್ನತವಾದ | high. |

ನ್ಯಾಯದಿಂದ ನಡೆ — to do right.
ಅಧಿಕಾರ ನಡಿಸು — to ex'er-cise au-thor'i-ty.
ವ್ಯಾಯಾಮ ಮಾಡು; ಆರೋಗ್ಯಕ್ಕಾಗಿ ತಿರುಗಾಡು — to take ex'ercise.
ಒಂದರ ಹಿಂದೆ ಒಂದು — one af'ter anoth'er.

☞ **Exercise** ಇದರ ಉಚ್ಚಾರ 'ಎಕ್ಸರ ಸೈಜ್' ಎಂದು ಆಗುತ್ತದೆ.

1) ಇದು ಯುರೋಪ ಖಂಡದಲ್ಲಿ ಬೆಳೆಯುವ ಯಾವತ್ತು ಮರಗಳಲ್ಲಿ ಅತಿ ದೊಡ್ಡದು.

## ಭಾಷಾಂತರಪಾಠ ೨೨.

ಗದ್ಯ The table stands *on* the floor. 2 We lie[1] *on* the bed. 3 Your turban is lying *on* the ground, 4 We *are* standing upon the ground. 5 Rain falls down *on* the earth. 6 He fell down *on* a stone. 7 London is *on* the banks of Thames[2]. 8 The hat is *upon* his head. 9 The eagle is sitting *on* the rock. 10 What bird is that *upon* the roof of your house? 11 I saw some beautiful stones *upon* the hill. 12 Cattle live *upon* grass. 13 The price of virtuous woman is *above* rubies. 14 Heaven is *above* skies[3]. 15 The smoke rises *over* the city. 16 The English people exercised authority *over* many peoples[4]. 17 A boat was sailing *over* the lake. 18 The deer leaped *over* the hedge. 19 Watch *over* your children. 20 Dost Thou[5] not see my sins? 21 I placed the pillow *beneath* my head. 22 Where do you keep your books? 23 The country has sunk[6] *beneath* the yoke. 24 He is sinking *beneath* the burden. 25 Brutes are *below* Man. 26 The rocks are twenty feet *below* the surface of the water. 27 He will do nothing *beneath* his rank and character. 28 They placed the men in a line one *after* another. 29 I came *after* him. 20 Many men in England think differently

---

1) ಇಲ್ಲಿ to lie ಅಂದರೆ 'ಮಲಗು'. 2) ಇದರ ಉಚ್ಚಾರ 'ಟೇಮ್ಸ್' ಆಗುತ್ತದೆ. 3) Sky, heaven ಎಂಬ ಶಬ್ದಗಳ ಅರ್ಥವು ಬಹುವಚನದಲ್ಲಿ ಏಕವಚನದಂತೆ 'ಆಕಾಶ' ಎಂದು ಆಗುತ್ತದೆ. ಆದರೆ heaven ಎಂಬ ಏಕವಚನದ ಶಬ್ದವನ್ನು 'ಸ್ವರ್ಗ' ಎಂಬ ಅರ್ಥದಿಂದ ಉಪಯೋಗಿಸುವದು ಬಹಳ. 4) People ಎಂಬ ಶಬ್ದವು ಸಂಘವಾಚಕ ನಾಮವು. ಇದಕ್ಕೆ ಸಾಧಾರಣವಾಗಿ ಬಹುವಚನದ ಕ್ರಿಯಾಪದವು ಬೇಕಾಗುತ್ತದೆ. ಆದರೆ ಬೇರೆ ಬೇರೆ ರಾಷ್ಟ್ರಗಳ ಇಲ್ಲವೆ ಜಾತಿಗಳ ಜನರು ಎಂಬ ಅರ್ಥವಿರಲಾಗಿ peoples ಎಂದು ಬಹುವಚನವಾಗುತ್ತದೆ. 5) ಇಂಗ್ಲಿಷದಲ್ಲಿ ಸರ್ವನಾಮಗಳನ್ನು ದೇವರನ್ನುದ್ದೇಶಿಸಿ ಉಪಯೋಗಿಸುವಾಗ ಅವುಗಳ ಮೊದಲನೆಯ ಅಕ್ಷರವನ್ನು ದೊಡ್ಡ ಅಕ್ಷರದಿಂದ ಬರೆಯುವ ಪದ್ಧತಿಯುಂಟು. 6) ಇಲ್ಲಿ sink ಅಂದರೆ ಕುಸಿ, ಕುಗ್ಗು.

*about* this matter. 31 The fertile plains of India lay[1] *before* them. 32 We saw the Godavary *before* us. 33 I saw a wall *around* the city. 34 We went *round* the city. 35 They stood *around* him. 36 Wind the rope *round* this windlass. 37 Everything *about* him is in order. 38 Have you got your snuff box with you? 39 The nobleman had *about* twenty followers. 40 No man *among* them understood our intention. 41 The shepherd stood in the midst[2] of his flock. 42 The two friends are of one mind. 43 He divided a rupee *between* them. 44 The soldiers were standing *between* the two oaks. 45 The troops marched *along* the bank of the river. 46 The holy man was standing *beside* the stream. 47. They brought many other charges *besides* this against the prisoner. 48 Good men will do right *without* law. 49 They fought *without* success. 50 The army marched twenty miles *beyond* the river. 51 It is entirely *beyond* our power. 52 His conduct is *beyond* my comprehension. 53 They have slain their fellow creatures *through* thirst[3] for gold. 54 He went *through* the field. 55 The wolf ran *through* the thicket. 56 His hand will be against every man. 57 This is a decree *against* law and public opinion. 58 The ship was sailing *against* the wind. 59 He spoke to me *concening* the affair. 60 Your conduct *towards* us is commendable. 61 We then marched *towards* the castle. 62 We fought *with* enemy for

---

1) To stand ಎಂಬದರಂತೆಯೇ to lie ಎಂಬದರ ಅರ್ಥವು ಒಮ್ಮೊಮ್ಮೆ 'ಇರು' ಎಂತ ಆಗುತ್ತದೆ.

2) ಇಲ್ಲಿ midst (ಮಧ್ಯಸ್ಥಲ) ಎಂಬದು ನಾಮಪದವೆಂದು ತಿಳಕೊಳ್ಳಬೇಕು. ಅಥವಾ in the midst of ಎಂಬದು ಸಂಯುಕ್ತ ಉಪಸರ್ಗಾವ್ಯಯವೆಂದು ತಿಳಿದುಕೊಳ್ಳಬಹುದು.

3) Thirst ನೀರಡಿಕೆ, ಎಂಬ ಶಬ್ದವನ್ನು ಅಲಂಕಾರಿಕ ಭಾಷೆಗೆ ಅನುಸರಿಸಿ 'ಆಶೆ' ಎಂಬ ಅರ್ಥದಿಂದ ಪ್ರಯೋಗಿಸಿ ಅದೆ.

## ಭಾಷಾಂತರಪಾಠ ೨೨.

ಗದ್ಯ The table stands *on* the floor. 2 We lie[1] *on* the bed. 3 Your turban is lying *on* the ground, 4 We *are* standing upon the ground. 5 Rain falls down *on* the earth. 6 He fell down *on* a stone. 7 London is *on* the banks of Thames[2]. 8 The hat is *upon* his head. 9 The eagle is sitting *on* the rock. 10 What bird is that *upon* the roof of your house? 11 I saw some beautiful stones *upon* the hill. 12 Cattle live *upon* grass. 13 The price of virtuous woman is *above* rubies. 14 Heaven is *above* skies[3]. 15 The smoke rises *over* the city. 16 The English people exercised authority *over* many peoples[4]. 17 A boat was sailing *over* the lake. 18 The deer leaped *over* the hedge. 19 Watch *over* your children. 20 Dost Thou[5] not see my sins? 21 I placed the pillow *beneath* my head. 22 Where do you keep your books? 23 The country has sunk[6] *beneath* the yoke. 24 He is sinking *beneath* the burden. 25 Brutes are *below* Man. 26 The rocks are twenty feet *below* the surface of the water. 27 He will do nothing *beneath* his rank and character. 28 They placed the men in a line one *after* another. 29 I came *after* him. 20 Many men in England think differently

---

1) ಇಲ್ಲಿ to lie ಅಂದರೆ ‘ ಮಲಗು ’. 2) ಇದರ ಉಚ್ಚಾರ ‘ ಟೇಮ್ಸ ’ ಆಗುತ್ತದೆ. 3) Sky, heaven ಎಂಬ ಶಬ್ದಗಳ ಅರ್ಥವು ಬಹುವಚನದಲ್ಲಿ ಏಕವಚನದಂತೆ ‘ ಆಕಾಶ ’ ಎಂದು ಆಗುತ್ತದೆ. ಆದರೆ heaven ಎಂಬ ಏಕವಚನದ ಶಬ್ದವನ್ನು ‘ ಸ್ವರ್ಗ ’ ಎಂಬ ಅರ್ಥದಿಂದ ಉಪಯೋಗಿಸುವದು ಬಹಳ. 4) People ಎಂಬ ಶಬ್ದವು ಸಂಘವಾಚಕ ನಾಮವು. ಇದಕ್ಕೆ ಸಾಧಾರಣವಾಗಿ ಬಹುವಚನದ ಕ್ರಿಯಾಪದವು ಬೇಕಾಗುತ್ತದೆ. ಆದರೆ ಬೇರೆ ಬೇರೆ ರಾಷ್ಟ್ರಗಳ ಇಲ್ಲವೆ ಜಾತಿಗಳ ಜನರು ಎಂಬ ಅರ್ಥವಿರಲಾಗಿ peoples ಎಂದು ಬಹುವಚನವಾಗುತ್ತದೆ. 5) ಇಂಗ್ಲಿಷದಲ್ಲಿ ಸರ್ವನಾಮಗಳನ್ನು ದೇವರನ್ನುದ್ದೇಶಿಸಿ ಉಪಯೋಗಿಸುವಾಗ ಅವುಗಳ ಮೊದಲನೆಯ ಅಕ್ಷರವನ್ನು ದೊಡ್ಡ ಅಕ್ಷರದಿಂದ ಬರೆಯುವ ಪದ್ಧತಿಯುಂಟು. 6) ಇಲ್ಲಿ sink ಅಂದರೆ ಕುಸಿ, ಕುಗ್ಗು.

*about* this matter. 31 The fertile plains of India lay[1] *before* them. 32 We saw the Godavary *before* us. 33 I saw a wall *around* the city. 34 We went *round* the city. 35 They stood *around* him. 36 Wind the rope *round* this windlass. 37 Everything *about* him is in order. 38 Have you got your snuff box with you? 39 The nobleman had *about* twenty followers. 40 No man *among* them understood our intention. 41 The shepherd stood in the midst[2] of his flock. 42 The two friends are of one mind. 43 He divided a rupee *between* them. 44 The soldiers were standing *between* the two oaks. 45 The troops marched *along* the bank of the river. 46 The holy man was standing *beside* the stream. 47. They brought many other charges *besides* this against the prisoner. 48 Good men will do right *without* law. 49 They fought *without* success. 50 The army marched twenty miles *beyond* the river. 51 It is entirely *beyond* our power. 52 His conduct is *beyond* my comprehension. 53 They have slain their fellow creatures *through* thirst[3] for gold. 54 He went *through* the field. 55 The wolf ran *through* the thicket. 56 His hand will be against every man. 57 This is a decree *against* law and public opinion. 58 The ship was sailing *against* the wind. 59 He spoke to me *concening* the affair. 60 Your conduct *towards* us is commendable. 61 We then marched *towards* the castle. 62 We fought *with* enemy for

1) To stand ಎಂಬದರಂತೆಯೇ to lie ಎಂಬದರ ಅರ್ಥವು ಒಮ್ಮೊಮ್ಮೆ 'ಇರು' ಎಂತ ಆಗುತ್ತದೆ.

2) ಇಲ್ಲಿ midst (ಮಧ್ಯಸ್ಥಲ) ಎಂಬದು ನಾಮಪದವೆಂದು ತಿಳಕೊಳ್ಳಬೇಕು. ಅಥವಾ in the midst of ಎಂಬದು ಸಂಯುಕ್ತ ಉಪಸರ್ಗಾವ್ಯಯವೆಂದು ತಿಳಕೊಳ್ಳಬಹುದು.

3) Thirst ನೀರಡಿಕೆ, ಎಂಬ ಶಬ್ದವನ್ನು ಅಲಂಕಾರಿಕ ಭಾಷೆಗೆ ಅನುಸರಿಸಿ 'ಆಶೆ' ಎಂಬ ಅರ್ಥದಿಂದ ಪ್ರಯೋಗಿಸಿ ಅದೆ.

an hour. 63 The Gentleman travelled *with* me from Calcutta to Bombay. 64 He wounded himself *with* a knife. 65 The merchant shares the profits *with* the other partners. 66 The soldiers destroyed the city by fire. 67 Are the interests of the people of Manchester *against* those of the people of India ?

೧ ದೀಪಾವಳಿಯ[1] ಸುಮಾರಿಗೆ ಅವರು ನಮ್ಮ ಮನೆಗೆ ಬಂದಿದ್ದರು[2]. ೨ ನನ್ನ ಕೋಣೆಯು ನಿನ್ನ ಕೋಣೆಯ ಮೇಲೆ ಅದೆ. ೩ ನಾನು ಹೊಲದೊಳಗಿಂದ ಹೋದೆನು. ೪ ಆ ಮಾತು ನನ್ನ ಇಚ್ಛೆಯ ವಿರುದ್ಧವಾಯಿತು. ೫ ನಿಮ್ಮ ಸಂಗಡ ಇದ್ದ ಆ ಉದ್ದ[3] ಮನುಷ್ಯನು ಯಾರು ? ೬ ಆಕಾಶವು ಬಹಳ ಉನ್ನತವಾಗಿದೆ. ೭ ಅದು ನಮ್ಮ ತಲೆಯ ಮೇಲೆ ಅದೆ. ೮ ಸ್ಕಾಟಲಂಡ ದೇಶದಲ್ಲಿ ನಾವು ಉನ್ನತವಾದ ಪರ್ವತಗಳನ್ನೂ ಆಳವಾದ ಕಂದರಗಳನ್ನೂ ಕಂಡೆವು. ೯ ಮನೆಗಿಂತ ಮನೆಯ ಮುಂದಿನ[4] ಮರೆಗಳು (ಹೆಚ್ಚು) ಎತ್ತರವಾಗಿವೆ. ೧೦ ನಾನು ಆ ಕಾಲಕ್ಕೆ ಮನೆಯಲ್ಲಿರುವೆನು. ೧೧ ಬಾಗಿಲಲ್ಲಿ[5] ಕಾವಲುಗಾರನು ಕೊತಿದ್ದಾನೆ. ೧೨ ನಮ್ಮ ಚಿಕ್ಕಪ್ಪನ ಮಗನ ಹತ್ತರ ನಾನು ಕೂಡ್ರುತ್ತಿದ್ದೆನು. ೧೩ ಈ ಪುಸ್ತಕವು ನನಗೆ ಪೆಟ್ಟಿಗೆಯ ಹಿಂದೆ ಸಿಕ್ಕಿತು. ೧೪ ಆಕೆಯು ಕಲ್ಲಿನ ಮೇಲಿಂದ ಬಿಂಡೀ ಹೊಡೆದಳು. ೧೫ ನಮ್ಮ ಕಾಲುಗಳ ಕೆಳಗೆ ಬಹಳ ಪ್ರಾಣಿಗಳು ಸಾಯುತ್ತವೆ. ೧೬ ಇವನ ಹೊರ್ತು ಆತನಲ್ಲಿ ಇಬ್ಬರು ಸೇವಕರಿದ್ದರು. ೧೭ ಎರಡು ಕಿಡಕಿಗಳ ನಡುವೆ ಒಂದು ಕನ್ನಡಿ ತೂಗಾಡುತ್ತಿತ್ತು. ೧೮ ಸಿಂಧು ನದಿಯ ಆಚೆಗೆ ಯಾವ ಜನರು ವಾಸವಾಗಿರುತ್ತಾರೆ ? ೧೯ ಈ ನಾಲ್ಕು ವರುಷಗಳಲ್ಲಿ ಅವನು ನನಗೆ ಒಂದು ಪತ್ರವನ್ನು ಕಳುಹಿದನು. ೨೦ ಈ ಅಂಗಿಯ ಹೊರ್ತು ನನಗೆ ಬೇರೆ[6] ಅರಿವೆಗಳಿಲ್ಲ. ೨೧ ನಿನ್ನ ಸಲುವಾಗಿ ನಾನು ಏನು ಮಾಡಲಿ ? ೨೨ ಪಟ್ಟಣದ ಸುತ್ತುಮುತ್ತಲು ನಾವು ಕಂದಕವನ್ನು ಕಂಡೆವು. ೨೩ ನಿನ್ನ ಹೊರ್ತು ನನಗೆ ಬೇರೆ ಗೆಳೆಯರಿಲ್ಲ.

---

1) ದೀಪಾವಳಿ = the Divali holidays. 2) came.

3) ಗಡುತರ ಕಡಿಮೆ ಉದ್ದ ಹೆಚ್ಚು ಇದ್ದ ವಸ್ತುವಿಗೆ tall ಎಂಬ ಶಬ್ದವನ್ನು ಹಚ್ಚಬೇಕು. ವಿಶೇಷವಾಗಿ ಮನುಷ್ಯರಿಗೂ ಪಟಸ್ತಂಭಗಳಿಗೂ ನಿಲ್ಲಿಸಿದ ದೊಡ್ಡ ಕಂಬಗಳಿಗೂ ಈ ಶಬ್ದವನ್ನು ಹಚ್ಚುತ್ತಾರೆ. High ಎಂಬ ಶಬ್ದವು ವಸ್ತುಗಳಿಗೆ ಮಾತ್ರ ಹತ್ತುತ್ತದೆ.

ಉದಾ—A tall mast ಉದ್ದವಾದ ಪಟಸ್ತಂಭ; a tall tree ಉದ್ದವಾದ ಗಿಡ; a tall man ( ಇಲ್ಲಿ a high man ಅನ್ನಕೂಡದು ) ಉದ್ದ ಮನುಷ್ಯ.

4) Before ಅಥವಾ in front of. 5) At. 6) ಬೇರೆ ಇಲ್ಲ = no other.

೨೪ ನಿನ್ನನ್ನು ಬಿಟ್ಟು[1] ನಾನು ಅಲ್ಲಿಗೆ ಹೋಗಲಿಕ್ಕಿಲ್ಲ. ೨೫ ಅವನು ಆ ಸುದ್ದಿಯನ್ನು ಊರ ತುಂಬ ಮಾಡಿದನು[2]. ೨೬ ಅವನು ಬಂಡಿಯೊಳಗೆ ಕೂತಿದ್ದನು. ೨೭ ಅವನು ಬಾಕಿಲ ಆಚೆಗೆ ಜಿಗಿದನು. ೨೮ ಅವರು ಒಬ್ಬರಹಿಂದೊಬ್ಬರು ಮೆಲ್ಲಮೆಲ್ಲಗೆ ಬಂದರು. ೨೯ ನೀವು ದಿನಾಲು ವ್ಯಾಯಾಮ ಮಾಡುವದಿಲ್ಲವೋ ? ೩೦ ನಮಗೆ ಈ ದಸ್ತೈವಜು ಈ ಕಾಗದಗಳೊಳಗೆ ಸಿಕ್ಕಿತು. ೩೧ ನಮಗೆ ಮುಂದಿನ ಸೋಮವಾರ ದಿವಸ ಸೂಟಿ ಸಿಗುವದು. ೩೨ ಈ ಹುಡುಗನು ದಿನಾಲು ಹೊತ್ತು ಹೊತ್ತಿಗೆ ಸಾಲೆಗೆ ಬರುತ್ತಾನೆ. ೩೩ - ನಾನು ಸಾಲೆಯಿಂದ ಇದೇ ಈಗ ಬಂದೆನು. ೩೪ ನನ್ನನ್ನು ಬಿಟ್ಟು ಹೋಗುತ್ತೀಯಾ ? ೩೫ ಸಿರಸಿ ಸಿದ್ದಾಪುರ ತಾಲೂಕುಗಳಲ್ಲಿ ಅಡಿಕೆ, ಮೆಣಸು, ಯಾಲಕ್ಕಿ ಇವು ಬಹಳ ಬೆಳೆಯುತ್ತವೆ.

---

## ೨೩ ನೇ ಪಾಠ.

## THERE

೧೩೯ To be ಎಂಬ ಕ್ರಿಯಾಪದವು ಅಸ್ತಿತ್ವವನ್ನು ತೋರಿಸಿದರೆ, ಇಲ್ಲವೆ ಈ ಕ್ರಿಯಾಪದಕ್ಕೆ ಬರೇ ಕರ್ತೃಪದವಿದ್ದರೆ, ಅಂದರೆ ಮುಂದೆ ಉತ್ತರ ವಿಶೇಷಣವಾಗಲಿ (ಉದಾ:- I am *ill*) ವಿಧಾನಾರ್ಥಕ ಪ್ರಥಮೆಯಾಗಲಿ (ಉದಾ:- It is a *cat*) ಇರದಿದ್ದರೆ, ವಾಕ್ಯದಲ್ಲಿ ಮೊದಲು there ಎಂಬ ಶಬ್ದವನ್ನಿಟ್ಟು ಕರ್ತೃಪದವನ್ನು ಕ್ರಿಯಾಪದದ ಮುಂದೆ ಹಾಕುತ್ತಾರೆ. ಇಂಥಲ್ಲಿ there ಎಂಬದು ವಾಕ್ಯಪೂರಕ ಶಬ್ದವಿದ್ದು ಅದಕ್ಕೆ ಅರ್ಥವಿಲ್ಲ. ಉದಾ:—

| | |
|---|---|
| *There* is God | ದೇವರು ಇದ್ದಾನೆ. |
| *There* are no devils | ದೆವ್ವಗಳಿಲ್ಲ. |
| *There* is a book | ಪುಸ್ತಕವುಂಟು. |
| *There* was a merchant in China | ಚೀನ ದೇಶದಲ್ಲಿ ಒಬ್ಬ ವರ್ತಕನಿದ್ದನು. |

---

1) ಒಡನೆ, ಕೂಡಿಕೊಂಡು=with ಇದಕ್ಕೆ ವಿರೋಧವಾದ ಶಬ್ದವು 'ಬಿಟ್ಟು'=without.
2) He filled the town with the news, or he spread the news all over (through) the town. 3) Over.

☞ ಇಂಥಲ್ಲಿ ಚನ್ನಾಗಿ ಲಕ್ಷ್ಯದಲ್ಲಿಡತಕ್ಕದ್ದೇನಂದರೆ, Devils are not, A book is, etc. ಹೀಗೆ ಅನ್ನಕೂಡದು.

೧೪೦ ವಾಕ್ಯದೊಳಗೆ ಸ್ಥಲವಾಚಕ there ಎಂಬ ಶಬ್ದವಿದ್ದು ಅದರ ಮೇಲೆ ಆಘಾತವಿರಲಾಗಿ, ಬಹುತರವಾಗಿ ಇದೇ ಮೇರೆಗೆ ಪ್ರಯೋಗವಾಗುತ್ತದೆ: ಹೇಗಂದರೆ—

Look ! *there* is our friend. ಅಗೋ ! ಅಲ್ಲಿ ನಮ್ಮ ಸ್ನೇಹಿತನು ಇದ್ದಾನೆ.

ಆದರೆ ಇಂಥಲ್ಲಿ there ಎಂಬ ಶಬ್ದವು ವಾಕ್ಯದ ಕೊನೆಗಿದ್ದರೂ ಸಾಗುತ್ತದೆ.

೧೪೧ ಹಲವು ವಾಕ್ಯಗಳಲ್ಲಿ ಕ್ರಿಯಾಪದವು ಅಕರ್ಮಕವಿದ್ದಾಗ ಇಲ್ಲವೆ ಒಮ್ಮೊಮ್ಮೆ ಸಕರ್ಮಕವಿದ್ದಾಗ ಸಹ, ಗಂಭೀರವಾದ ಭಾಷೆಯಲ್ಲಿ there ಎಂಬ ಶಬ್ದವನ್ನು ಆರಂಭದಲ್ಲಿ ಹಾಕುವ ಪರಿಪಾಠವು ತಕ್ಕಮಟ್ಟಿಗೆ ಉಂಟು. ಉದಾ—

*There* arose a thick smoke from the valley ಕಂದರದೊಳಗಿಂದ ದಟ್ಟವಾದ ಹೊಗೆ ಹೊರಟಿತು.

*There* came a voice from heaven ಆಕಾಶವಾಣಿಯಾಯಿತು, ಅಥವಾ ದಿವ್ಯ ಧ್ವನಿ ಹೊರಟಿತು.

*There* followed him an army ದಂಡು ಅವನ ಹಿಂದಿಂದ ಹೋಯಿತು.

*There* is needed an improvement in the moral culture ನೀತಿ ಶಿಕ್ಷಣದಲ್ಲಿ ತಿದ್ದುಪಾಟು ಅವಶ್ಯವಾಗಿದೆ.

೧೪೨ ಶಬ್ದಸಂಗ್ರಹ ೨೩.

| | | | |
|---|---|---|---|
| A philos'o-pher | ತತ್ವಜ್ಞಾನಿ. | A thorn | ೧ ಮುಳ್ಳುಗಿಡ—ಕಂಟಿ; ೨ ಮುಳ್ಳು. |
| A proph'et | ದೈವಪ್ರೇರಿತ ಧರ್ಮೋಪದೇಶಕ, ಭವಿಷ್ಯವಾದಿ, ಪ್ರವಾದಿ. | A u'sur-er | ಮಿತಿಮೀರಿ ಬಡ್ಡಿ ತಕ್ಕೊಳ್ಳುವವ. |
| An im-post'er | ವಂಚಕ, ಮೋಸಗಾರ. | A croc'odile | ಮೊಸಳೆ. |
| A vol'ume | ಪುಸ್ತಕ. | Strange | ವಿಲಕ್ಷಣವಾದ ವಿಚಿತ್ರವಾದ, ಅಪೂರ್ವ. |
| A li'bra-ry | ಪುಸ್ತಕಾಲಯ. | A ban'ian tree | ಆಲದ ಮರ. |

A pupil / A stu-dent } ಶಿಷ್ಯ, ವಿದ್ಯಾರ್ಥಿ.
A stock ಸಂಗ್ರಹ.
A mount'ain ಪರ್ವತ, ಬೆಟ್ಟ, ಗುಡ್ಡ.
An-cient ಪ್ರಾಚೀನ, ಪುರಾತನ.
A lit-tle, a few ಸ್ವಲ್ಪ.
Few, lit'tle ಸ್ವಲ್ಪವೇ, ತೀರ ತುಸು.
To turn (೧ ತಿರುಗು; ೨ ತಿರುಗಿಸು.)
A few, some ಕೆಲವು.
Dis'tance ಅಂತರ, ದೂರ.
To ac-com'pany { ಜೊತೆಗೆ, ಸಂಗಡ ಹೋಗು.
A co-coanut tree ತೆಂಗಿನ ಮರ.
Shelt'er ಮರೆ, ಆಶ್ರಯ, ಆಸರ.
ಪೇರಲ ಗಿಡ / ಸೀಬೆ ಹಣ್ಣಿನ ಗಿಡ } a gua'va tree.
ಜೇಬು, ಕಿಸೆ a pock'et.
ಗಿಳಿ a par'rot.
ಸಂಶಯ a doubt.
ಭಿಕ್ಷುಕ, ಯಾಚಕ a beg'gar.
ಅಕ್ರೋಡದ ಗಿಡ a wal'nut tree.
ಮೆಣಸು a pep'per.

## ಭಾಷಾಂತರಪಾಠ ೨೩.

1 *There* are many beautiful birds in our garden. 2 *There* are a few flowers in the basket. 3 I have very little money with me just now. 4 *There* are very few men on the seashore just now. 5 *There* were great philosophers among the ancient Hindus. 6 They had knowledge of the true God. 7 *There* is false prophet in the next[1] village. 8 *There* have been such impostors at all times. 9 *There* are good people in every country. 10 *There* will be few potatoes this year. 11 *There* were many good volumes in that library. 12 You have got a valuable stock of books. 13 *There* are some guests at his house. 14 *There* are strange animals in America. 15 He accompanied me to Hubli. 16 There are some very bad boys among my pupils. 17 The seed fell among thorns. 18 We found shelter under a large banian tree. 19 We saw the Himalaya mountain at some

1) Next ನೆರೆ.

distance. 20 The corn in the field will soon be ripe. 21 The boys went into a forest for birds' nests. 22 The mangoes in our garden are not yet ripe. 23 *There* were many strangers in the room. 24 *There* are many beautiful temples at Wai. 25 *There* are many usurers in that town. 26 *There* are crocodiles found in Nile.

೧ ಬಾಗಿಲ ಹತ್ತರ ಭಿಕ್ಷುಕನು ನಿಂತಿದ್ದಾನೆ. ೨ ಇಂಗ್ಲಂಡ ದೇಶದಲ್ಲಿ ಎಷ್ಟೋ ಮಂದಿ ಬಡವರಿದ್ದಾರೆ. ೩ ಇಂಗ್ಲಂಡದೊಳಗೆ ಕಲ್ಲಿದ್ದಲಿಯ ಕಣಿಗಳು ಬಹಳ. ೪ ನಿಮ್ಮ ಪುಸ್ತಕಾಲಯದಲ್ಲಿ ಕಾದಂಬರಿಗಳುಂಟೋ ? ೫ ಆ ಮನೆಯೊಳಗೆ ಒಂದು ಬಾವಿಯುಂಟು. ೬ ಆ ಗಿಡದ ಮೇಲೆ ಬಹಳ ಗಿಳಿಗಳು ಅವೆ. ೭ ದೌತಿಯಲ್ಲಿ ಮಸಿ ಇಲ್ಲವೋ ? ೮ ಈ ಅಡವಿಯಲ್ಲಿ ಬಹಳ ಹುಲಿಗಳಿವೆ. ೯ ಈ ದೀಪದೊಳಗೆ ಎಣ್ಣೆ ಇಲ್ಲ. ೧೦ ನಿನಗೆ ಜೋಡು ಇಲ್ಲವೋ ? ೧೧ ನಮ್ಮ ತೋಟದೊಳಗೆ ಪೇರಲ ಗಿಡಗಳಿವೆ. ೧೨ ಆ ಮೇಜಿನ ಮೇಲಿನ ಪುಸ್ತಕವು ನಿನ್ನದೋ ? ೧೩ ನಮ್ಮ ಊರೊಳಗೆ ಒಬ್ಬ ಹುಚ್ಚನಿದ್ದಾನೆ. ೧೪ ಪುಣೆಯಲ್ಲಿ ಬ್ರಾಹ್ಮಣರು[1] ಬಹಳ. ೧೫ ಅರಬಸ್ತಾನದಲ್ಲಿ[2] ಯಾವ ಜನರಿರುತ್ತಾರೆ. ೧೬ ಫ್ರಾನ್ಸ[3] ದೇಶಕ್ಕಿಂತ ನಿಮ್ಮ ದೇಶದಲ್ಲಿ ವಿದ್ವಾಂಸರ ಸಂಖ್ಯೆ ಹೆಚ್ಚು ಉಂಟೋ ? ೧೭ ಅವನ ಕಿಸೆಯೊಳಗೆ ರೊಕ್ಕದ ಚೀಲವದೆ. ೧೮ ತಲೆಗೆ ಮುಂಡಾಸು ಹಾಕಿಕೋ[4]. ೧೯ ಇರಾಣ[5] ದೇಶದಲ್ಲಿ ಅಕ್ರೋಡದ ಗಿಡಗಳು ಬಹಳ. ೨೦ ಆ ದೇಶದಲ್ಲಿ ಅಕ್ರೋಡದ ಗಿಡಗಳ ದೊಡ್ಡ ದೊಡ್ಡ ಹಳವುಗಳುಂಟು. ೨೧ ನಾನು ಕನ್ನಡಿಯನ್ನು ಮುಟ್ಟಲಿಲ್ಲ. ೨೨ ಒಬ್ಬ[6] ಒಕ್ಕಲಿಗನಿಗೆ ಇಬ್ಬರು ಮಕ್ಕಳಿದ್ದರು. ೨೩ ನಿಮ್ಮ ರಥಕ್ಕಿಂತ ನನ್ನ ಕುದುರೆಯು ನನಗೆ ಹೆಚ್ಚು ಬೆಲೆಯುಳ್ಳದ್ದು. ೨೪ ಆ ಗೃಹಸ್ಥನ ಸಂಗಡ ಬಹಳ ಮಂದಿ ಸೇವಕರಿದ್ದರು. ೨೫ ಒಂದಾನೊಂದು[7] ದಿವಸ ಒಬ್ಬ ಬಡ ಒಕ್ಕಲಿಗನು ತನ್ನ ಮಗನನ್ನು ಏನೋ ಒಂದು ಕೆಲಸದ ಸಲುವಾಗಿ[8] ಬೇರೊಂದು ಊರಿಗೆ ಕಳುಹಿದನು. ೨೬ ಒಂದು ದಿವಸ ರಾಮನು ಶಾಲೆಗೆ ಹೋಗಲಿಲ್ಲ. ೨೭ ನಿನ್ನ ವಿಷಯಕ್ಕೆ ಸಂಶಯುವಿಲ್ಲ. ೨೮ ಕೂಲಿಕಾರರ ತಲೆಯ ಮೇಲೆ ಭಾರವಾದ ಹೊರೆಗಳಿದ್ದವು. ೨೯ ಇಟಾಲಿ ದೇಶದೊಳಗಿನ ಟಸ್ಕನಿ ಎಂಬ ಪ್ರಾಂತದೊಳಗೆ ಪೀಜಾ

1) Brahmans. 2) Arabia. 3) France.
4) Put on your turban. 5) Persia 6) A certain.
7) One day. 8) On some business.

ಎಂಬದೊಂದು ಪಟ್ಟಣವದೆ. ೩೦ ಈ ಕೆಲಸದಲ್ಲಿ ನನಗೆ ಪಾಲುಗಾರನಿದ್ದಾನೆ. ೩೧ ಇದರ ಹೊರ್ತು ನೀನು ಸೌಖ್ಯವನ್ನು ಹೊಂದಲಿಕ್ಕಿಲ್ಲ. ೩೨ ಹಣವು ಈ ಜಗತ್ತಿನಲ್ಲಿ ಬಹಳ ಉಪಯೋಗವುಳ್ಳದ್ದು. ೩೩ ಹಿಂದೂ ದೇಶಕ್ಕೂ ಆಫ್ರಿಕಕ್ಕೂ ನಡುವೆ ಒಂದು ಸಮುದ್ರವುಂಟು. ೩೪ ನಿನ್ನೆ ನಾನು ಒಂದು ಮೊಸಳೆಯನ್ನು ಕಂಡೆನು. ೩೫ ಗೋದಾವರಿಯ ತೀರದಲ್ಲಿ ದೊಡ್ಡದೊಂದು ಆಲದ ಮರವಿರುವದು.

---

## ೨೪ ನೇ ಪಾಠ.

### ಕರ್ಮಣಿ ಪ್ರಯೋಗ.

### PASSIVE VOICE.

೧೪೪. ಇಂಗ್ಲಿಷದಲ್ಲಿ ಸಕರ್ಮಕ[1] ಕ್ರಿಯಾಪದದಿಂದ ಬಹುತರವಾಗಿ ಎಲ್ಲ ಕಾಲಗಳಲ್ಲಿ ಕರ್ಮಣಿ ಪ್ರಯೋಗವಾಗುತ್ತದೆ. ಅದಕ್ಕೆ Passive Voice ಅನ್ನುತ್ತಾರೆ. ಇದು ಕನ್ನಡ ಗ್ರಂಥಗಳಲ್ಲಿ ಒಮ್ಮೊಮ್ಮೆ ಕಂಡು ಬಂದರೂ ಇದನ್ನು ರೂಢಿಯಲ್ಲಿ ಉಪಯೋಗಿಸುವದು ಅಪರೂಪ[2]. ಆದರೆ ಇಂಗ್ಲಿಷದಲ್ಲಿ ಕರ್ಮಣಿ ಪ್ರಯೋಗವನ್ನು ಬಹಳ ಉಪಯೋಗಿಸುತ್ತಾರೆ. ಪುರವಣಿಯಲ್ಲಿ To Call ಎಂಬ ಕ್ರಿಯಾಪದವನ್ನು ನಡಿಸಿ ತೋರಿಸಿದ್ದೇವೆ; ಅದರಿಂದ ಇಂಗ್ಲಿಷದಲ್ಲಿ ಕರ್ಮಣಿ ಪ್ರಯೋಗದ ರೂಪಗಳು ಹೇಗಾಗುತ್ತವೆಂಬದನ್ನು ತಿಳಿದುಕೊಳ್ಳಬಹುದು. ಮುಖ್ಯವಾಗಿ ಲಕ್ಷ್ಯದಲ್ಲಿಡತಕ್ಕದ್ದೇನಂದರೆ, ಕರ್ಮಣಿ ಪ್ರಯೋಗದಲ್ಲಿ To be ಎಂಬ ಸಹಾಯ ಕ್ರಿಯಾಪದವನ್ನು ಪ್ರಯೋಗಿಸಿ, ಮುಂದೆ ಮುಖ್ಯ ಕ್ರಿಯಾಪದದ ಭೂತಕೃದ್ವಾಚಕವನ್ನು ಹಾಕಬೇಕು. ಇದಲ್ಲದೆ ಕರ್ತರಿ ಪ್ರಯೋಗವನ್ನು ಕರ್ಮಣಿ ಪ್ರಯೋಗ ಮಾಡುವಾಗ, ದ್ವಿತೀಯೆಯಲ್ಲಿರುವ ಕರ್ಮಪದವನ್ನು ಪ್ರಥಮೆ ಮಾಡಿ by ಎಂಬ ಉಪಸರ್ಗಾವ್ಯಯದೊಡನೆ ಕ್ರಿಯಾಪದದ ಮುಂದೆ ಇಡಬೇಕು.

---

1) To have ಎಂಬ ಕ್ರಿಯಾಪದವು ಸಕರ್ಮಕವಿದ್ದಾಗ್ಯೂ 'ಹತ್ತಿರ ಇರು' ಎಂಬ ಅರ್ಥವಿದ್ದಾಗ ಅದರ ಕರ್ಮಣಿ ಪ್ರಯೋಗವಾಗುವದಿಲ್ಲ. 2) ಕನ್ನಡದಲ್ಲಿ 'ಮನೆ ಕಟ್ಟಿತು' the house was built; 'ಹಣ ಕೊಟ್ಟದೆ' the money was given ಮುಂತಾದ ಕರ್ಮಣ್ಯರ್ಥಕ ರೂಪಗಳನ್ನು ರೂಢಿಯೋಗಿನ ಭಾಷೆಯಲ್ಲಿ ಉಪಯೋಗಿಸುವದುಂಟು. ಆದರೆ, ಪಡು, ಆಗು ಎಂಬ ಸಹಾಯ ಕ್ರಿಯಾಪದಗಳಿಂದ ಆದ ರೂಪಗಳನ್ನು ಬಹುತರ ಉಪಯೋಗಿಸುವದಿಲ್ಲ.

ಕನ್ನಡದಲ್ಲಿ ಭಾಷಾಂತರ ಮಾಡುವಾಗ ಕೇವಲ ಅರ್ಥದ ಕಡೆಗೆ ಲಕ್ಷ್ಯಕೊಟ್ಟು, ಕರ್ಮಣಿ ಪ್ರಯೋಗಕ್ಕೆ ಬದಲಾಗಿ ಕರ್ತರಿ ಪ್ರಯೋಗವನ್ನು ಪ್ರಯೋಗಿಸುವದು ಒಳ್ಳೇದು.

ಉದಾ: ಕರ್ತರಿ—He teaches me ಅವನು ನನಗೆ ಕಲಿಸುತ್ತಾನೆ.
ಕರ್ಮಣಿ—I am taught by him ನಾನು ಅವನಿಂದ ಕಲಿಸಲ್ಪಡುತ್ತೇನೆ; ಅಥವಾ ಅವನು ನನಗೆ ಕಲಿಸುತ್ತಾನೆ.

ಅಕರ್ಮಕ ಕ್ರಿಯಾಪದಗಳಿಂದ ಕರ್ಮಣಿ ಪ್ರಯೋಗವಾಗುವದಿಲ್ಲ.

ಅನಿಯಮಿತ ವರ್ತಮಾನಕಾಲದಿಂದ ಕರ್ಮಣಿ ಪ್ರಯೋಗವನ್ನು ಮಾಡಿದರೆ, ಅದರ ಅರ್ಥವು ಒಮ್ಮೊಮ್ಮೆ ಪೂರ್ಣವರ್ತಮಾನಕಾಲದಂತೆ ಆಗುತ್ತದೆ.
ಉದಾ—A letter is *written* ಪತ್ರ ಬರೆದದೆ.

## ೧೮ನೇ ಶಬ್ದಸಂಗ್ರಹ ೨೮.

A spoon ಚಮಚ, (ಸಣ್ಣ) ಸವುಟು.
A ket'tle ಹಂಡೆ, ಕಡಾಯಿ.
A king'dom ರಾಜ್ಯ.
A sheaf ಸಿವುಡು, ಹಿಡಿ.
A bat'tle ಕಾಳಗ, ಕದನ, ಯುದ್ಧ.
A piece (of money) } ನಾಣ್ಯ.
A coin
For-ev er {ಯಾವಾಗಲೂ, ನಿರಂತರ, ಸದಾ.
To con'quer ಗೆಲ್ಲು, ಜಯಿಸು.
To coin ನಾಣ್ಯ ಮಾಡು.
Dil'igence ಪರಿಶ್ರಮ, ಆಸಕ್ತಿ, ತತ್ಪರತೆ.
Blessing {೧ ಅನುಗ್ರಹ, ದೇವತಾ ಪ್ರಸಾದ; ೨ ಆಶೀರ್ವಾದ.

An em'per-or ಚಕ್ರವರ್ತಿ.
To ban'ish {ಗಡಿಪಾರ ಮಾಡು, ಹದ್ದುಪಾರ ಮಾಡು.
To reap {೧ ಕೊಯ್ಯು, ೨ ಫಲವುಣ್ಣು.
To re-venge {ಸೇಡು ತಕ್ಕೊಳ್ಳು, ಹಗೆ ತೀರಿಸು.
To sep'arate ಅಗಲಿಸು, ಬಿಂಗಡಿಸು.
To mur'der[1] {ಕೊಲ್ಲು, ಖೂನಮಾಡು, ಕೊಲೆ ಹತ್ಯೆ ಮಾಡು.
To mas'sa-cre[1] {ಕೊಲೆ ಮಾಡು. ಸಂಹಾರ ಮಾಡು.
To give up ಬಿಟ್ಟುಬಿಡು.
To esteem, {ಬಹಳ ಮನ್ನಿಸು, ಗಣನೆಗೆ ತರು.
Gamb'ling ಜೂಜು.
Supplica'tion {ವಿಜ್ಞಾಪನೆ, ಪ್ರಾರ್ಥನೆ.

1) ಒಬ್ಬರನ್ನು ಕೊಂದರೆ murder ಎಂಬ ಶಬ್ದವನ್ನೂ, ಬಹಳ ಮಂದಿಯನ್ನು ಕೊಂದರೆ massacre ಎಂಬ ಶಬ್ದವನ್ನೂ ಉಪಯೋಗಿಸುತ್ತಾರೆ.

## ಭಾಷಾಂತರಪಾಠ ೨೪.

ಇಂ. 1 What is *made* of silver? 2. Money is *made* of silver. 3 So are[1] spoons, forks, knives etc. 4 What *is made* of gold? 5 Some pieces of money, rings, watches, chains, and many other beautiful things are *made* of gold. 6) My father has promised me a gold[2] watch with a gold chain. 7 Of copper and tin they[3] make kettles. 8 These rupees[4] *were coined* last year. 9 Good men are generally *loved* and *esteemed* by all. 10 The good boys were *rewarded* and *praised* for their diligence. 11 Say, *is* my kingdom *lost*? 12 He *is taken;* Galas has given him up to the emperor. 13 Who *has been* taken? 14 Who *is given* up? 15 He is *separated*, from all his friends. 16 Her husband *has been banished* and she is *imprisoned*. 17 Thy work *is done*. 18 The hero's death *was revenged*. 19 Your friend *was deceived* by his neighbour. 20 He *was delivered* into the hands of his enemies. 21 We *were told* so by one of the soldiers. 22 The city *will be taken* and all the inhabitants *massacred*[5]. 23 The barley[6] *was reaped* and its heavy sheaves lay on the field. 24 The fields *are being ploughed* by the husbandmen. 25 Many *are called* but few *are chosen*.

---

1) ಇಲ್ಲಿ made ಎಂಬ ಶಬ್ದವು ಅಧ್ಯಾಹೃತವದೆ. 2) ಇದು ಇಲ್ಲಿ ವಿಶೇಷಣವದೆ. 3) ಜನರು. 4) 'ಬೇರೆ ಬೇರೆ ನಾಣ್ಯಗಳು' ಎಂಬ ಅರ್ಥವಿರಲಾಗಿ ಕ್ರಿಯಾಪದವು ಬಹುವಚನದಲ್ಲಿರಬೇಕು. 'ಇಪ್ಪು, ಹಣ' 'ಬೆಲೆ' ಎಂಬ ಅರ್ಥವಿರಲಾಗಿ ಏಕವಚನದಲ್ಲಿರಬೇಕು. ಉದಾ: *These* are the very rupees my father sent me ನನ್ನ ತಂದೆಯು ನನಗೆ ಕಳಿಸಿದ ರೂಪಾಯಿಗಳು ಇವೇ. *This* twenty rupees my father sent me ಈ ಇಪ್ಪತ್ತು ರೂಪಾಯಿ ನನ್ನ ತಂದೆ ನನಗೆ ಕಳಿಸಿದನು. Rupees pounds ಎಂಬ ಶಬ್ದಗಳನ್ನು ವಿಶೇಷಣದಂತೆ ಪ್ರಯೋಗಿಸಿದಾಗ ಏಕವಚನದ ರೂಪವನ್ನು ಉಪಯೋಗಿಸಬೇಕು. ಉದಾ—A ten rupee note, a five pound note. 5) Will be ಎಂಬದನ್ನು ಅಧ್ಯಾಹಾರ ಮಾಡಬೇಕು. 6) Barley = ಜವೆಗೋದಿ.

**26 Awake, arise, or[1] be for ever fallen[2]. 27 The French *were conquered* at the battle of Leipzic on, the 18th of October[3] 1813, and at the battle of Waterloo on the 18th June 1815.**

---

## ೨೫ ನೇ ಪಾಠ.

### ಕನ್ನಡ ಪ್ರಯೋಗಗಳ ಭಾಷಾಂತರ.

### Kannada Prayogas: how to render.

೧೪೭ ಕನ್ನಡ ಕರ್ತರಿ ಪ್ರಯೋಗದ ಭಾಷಾಂತರವನ್ನು ಬಹುತರವಾಗಿ ಕರ್ತರಿ ಪ್ರಯೋಗದಿಂದಲೇ ಮಾಡಬೇಕು. ಉದಾ—

ನಾಯಿಯು ಈ ಮನುಷ್ಯನನ್ನು ಕಚ್ಚಿತು. A dog bit this man.

ಆದರೆ ಕರ್ಮಪದಕ್ಕೆ ಪ್ರಾಧಾನ್ಯವಿರಲಾಗಿ, ಇಂಗ್ಲಿಷದಲ್ಲಿ ಕರ್ಮಣಿ ಪ್ರಯೋಗವನ್ನು ಉಪಯೋಗಿಸಬೇಕು. ಉದಾ -

ಈ ಮನುಷ್ಯನನ್ನು ನಾಯಿ ಕಚ್ಚಿತು. This man was bitten by a dog.

೧೪೮ ಕರ್ಮಣಿ ಪ್ರಯೋಗದ ಭಾಷಾಂತರವನ್ನು ಶಬ್ದಶಃ ಮಾಡುವದಾದರೆ, ಇಲ್ಲವೆ ಕರ್ತೃಪದಕ್ಕಿಂತ ಕರ್ಮಪದಕ್ಕೆ ಪ್ರಾಧಾನ್ಯವಿದ್ದರೆ, ಇಂಗ್ಲಿಷದಲ್ಲಿ ಕರ್ಮಣಿ ಪ್ರಯೋಗವನ್ನು ಪ್ರಯೋಗಿಸಬೇಕು; ಇಲ್ಲದೆ ಇದ್ದರೆ ಕರ್ತರಿ ಪ್ರಯೋಗವನ್ನು ಹಾಕಬಹುದು.

ಉದಾ—ಅರಸನಿಂದ ರಾಜ್ಯವು ಆಳಲ್ಪಟ್ಟಿತು.

ಶಬ್ದಶಃ ಅಥವಾ ಕರ್ಮಪ್ರಧಾನ-The country was governed by the king, ಅಥವಾ The king governed the country.

---

1) Or ಇಲ್ಲವೆ, ಇಲ್ಲದಿದ್ದರೆ. 2) 'ಪತಿತ' ಇದು ವಿಶೇಷಣವೆಂದು ತಿಳಿಯಬೇಕು. 3) ಇಂಗ್ಲಿಷ ತಿಂಗಳುಗಳ ಹೆಸರುಗಳು—January, February; March, April, May, June, July, August, September, October, November, December ಈ ತಿಂಗಳುಗಳ ಆರಂಭದಲ್ಲಿ ದೊಡ್ಡ ಅಕ್ಷರ ಬರೆಯಬೇಕು.

೧೪೯ ಭಾವಕರ್ತೃಕ ಪ್ರಯೋಗವನ್ನು ಇಂಗ್ಲಿಷದಲ್ಲಿ ಭಾಷಾಂತರ ಮಾಡುವದಾದರೆ, ಕರ್ತರಿ ಪ್ರಯೋಗದಿಂದಾಗಲಿ, ಕರ್ಮಣಿ ಪ್ರಯೋಗದಿಂದಾಗಲಿ ಮಾಡಬಹುದು.

ಉದಾ—ಅವನಿಗೆ ಈಗ ಚೆನ್ನಾಗಿ ಈಸಲಿಕ್ಕೆ ಬರುತ್ತದೆ. He is now able to swim well.

ರಾಧೆಯನ್ನು ಕೃಷ್ಣನಿಗೆ ಕೊಟ್ಟದೆ. Radha is given in marriage to Krishna.

☞ ಇಂಗ್ಲಿಷದಲ್ಲಿ It rains ಮಳೆಯಾಗುತ್ತದೆ, It snows ಹಿಮ ಬೀಳುತ್ತದೆ ಮುಂತಾದ ಹಲವು ವಾಕ್ಯಗಳುಂಟು. ಈ ಪ್ರಕಾರದ ವಾಕ್ಯ ರಚನೆಗೆ Impersonal construction 'ಅಕರ್ತೃಕ ವಾಕ್ಯರಚನೆ' ಅನ್ನುತ್ತಾರೆ. ಇಂಥ ವಾಕ್ಯಗಳ ಭಾಷಾಂತರ ಮಾಡುವಾಗ ಕನ್ನಡದಲ್ಲಿ ಕರ್ತರಿ ಪ್ರಯೋಗವನ್ನು ಉಪಯೋಗಿಸಬೇಕು.

### ೧೫೦ ಶಬ್ದಸಂಗ್ರಹ ೩೫.

| | | | |
|---|---|---|---|
| ವಜೀರ, ಮುಖ್ಯ ಮಂತ್ರಿ, ಪ್ರಧಾನಿ | a vi-zier'. a prime min'ister. a pre'mi'-er. | ಬಹು ತೀವ್ರ ಒಡೆಯುವಂಥ ಬೆಡಸು | brit'tle. |
| | | ವಾಯು | a gas. |
| ಲೀಲೆ | sport, play. | ಗುಬ್ಬಿ | a spar'row. |
| ಅಗಾಧ | Un-fath'om'able. | ದುಃಖ | pain, sor'row.[2] |
| ರಾಯಭಾರಿ, ವಕೀಲ | an en'voy. | ದುಃಖಿ, ಖಿನ್ನ | sor'ry. |
| ಗುಡಾರ | a tent. | ಮಾನ, ಕೀರ್ತಿ | re-pu-tation. |
| ತೋಫು | a gun, a can'non[1]. | ಕಠೋರವಾದ ಮನಸ್ಸಿಗೆ ಹತ್ತುವಂಥ | harsh. |
| ಕತ್ತಿ | a sword. | | |

1) ಇದರ ಬಹುವಚನವು ಏಕವಚನದಂತೆಯೇ ಆಗುತ್ತದೆ. 2) Sorrow ಎಂಬ ಶಬ್ದವನ್ನು ಮನಸ್ಸಿಗೆ ವ್ಯಸನವಾದರೆ ಹಚ್ಚುತ್ತಾರೆ; pain ಎಂಬದನ್ನು ಮನಸ್ಸಿನ ದುಃಖಕ್ಕೂ ಶರೀರದ ದುಃಖಕ್ಕೂ ಹಚ್ಚುತ್ತಾರೆ; ಆದರೆ ಶರೀರದ ದುಃಖಕ್ಕೆ ಹಚ್ಚುವದು ಬಹಳ. ಸಾಧಾರಣ ತರದ ವ್ಯಸನವಾಗುತ್ತಿದ್ದರೆ sorry ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. ಉದಾ— I am sorry (ಸ್ವಲ್ಪ) ವ್ಯಸನವಾಗುತ್ತದೆ.

| | | | |
|---|---|---|---|
| ಹಾದಿಕಾರ | a tra-vel-ler, a pas'senger. | ಕೂಡಿ, ಒಟ್ಟನೆ | to-geth'er. |
| ವಿಶ್ರಮಿಸು ದಣುವಾರಿಸಿಕೋ | to rest. | ನಾಲ್ಕೂ ಕಡೆಯಿಂದ | from all sides. |
| ಕಟಿಕರವ | a butcher. | ಹನ್ನೊಂದು | e-lev'en. |
| ತಿಳಿ | to un-der-stand. | ಹನ್ನೆರಡು | twelve. |

It hails — ಆಣೆಕಲ್ಲು ಬೀಳುತ್ತವೆ.
It is dark — ಕತ್ತಲೆ ಬಿದ್ದದೆ.
It is cold — ಚಳಿ ಬಿದ್ದದೆ.
It is hot — ಸೆಕೆಯಾಗುತ್ತದೆ.
It is windy — ಗಾಳಿ ಬಿಟ್ಟದೆ.
It is late — ಹೊತ್ತಾಯಿತು[1]
It is morning — ಬೆಳಗಾಯಿತು.
It is evening — ಸಂಜೆಯಾಯಿತು
What o'clock[2] is it? — ಎಷ್ಟು ಗಂಟೆಯಾಯಿತು?
It is one o'clock — ಒಂದು ಗಂಟೆಯಾಯಿತು.
It is half past[3] six o'clock — ಆರೂವರೆ ಗಂಟೆಯಾಯಿತು.
It is a quarter past twelve — ಹನ್ನೆರಡು ಕಾಲು ಗಂಟೆಯಾಯಿತು.
It is a quarter to ten — ಹದಿನೈದು ನಿಮಿಷ ಕಡಿಮೆ ಹತ್ತು ಗಂಟೆಯಾಯಿತು.
It is four minutes[4] to five — ಐದಕ್ಕೆ ನಾಲ್ಕು ಮಿನಿಟು ಕಡಿಮೆ ಆದೆ.

### ಭಾಷಾಂತರಪಾಠ ೨೫.

೧೫೧ ೧ ವಜೀರನು ಚಿತ್ರವನ್ನು ಚಕ್ರವರ್ತಿಯ ಕೈಯಲ್ಲಿ ಕೊಟ್ಟನು. ೨ ಅವನು ರಾಜಪುತ್ರನಿಗೆ ಪತ್ರಾ ಬರೆದು ರಾಯಭಾರಿಯ ಕೈಯಲ್ಲಿ ಕೊಟ್ಟು ಕಳುಹಿದನು[5] ೩ ದೇವರ ಲೀಲೆಯು[6] ಅಗಾಧವಾದದ್ದು. ೪ ರಾತ್ರಿಯಲ್ಲಿ

1) ಇಂಥ ವಾಕ್ಯಗಳಲ್ಲಿ ಕನ್ನಡದಲ್ಲಿ ಸಾಧಾರಣವಾಗಿ ಭೂತಕಾಲವನ್ನು ಉಪಯೋಗಿಸುತ್ತಾರೆ. ಆದರೆ ಇಂಗ್ಲಿಷದಲ್ಲಿ ವರ್ತಮಾನಕಾಲವನ್ನು ಹಾಕಬೇಕಾಗುತ್ತದೆ. 2) O'clock= of (the) clock. 3) Past ಎಂಬದು ಇಲ್ಲಿ ಉಪಸರ್ಗಾವ್ಯಯವು. ಇದರ ಅರ್ಥ-ಮೇಲೆ, ಆಚೆಗೆ. 4) Minute (ಮಿನಿಟ್) ಅಂದರೆ ತಾಸಿನ ಅರವತ್ತನೆಯ ಪಾಲು; Second ಅಂದರೆ ಮಿನಿಟಿನ ಅರವತ್ತನೆಯ ಪಾಲು. 5) He sent the letter to the prince by envoy ಇಂಥಲ್ಲಿ with the envoy ಅನ್ನಕೂಡದು. 6) God's ways ಅಥವಾ doings.

ಎತ್ತ ನೋಡಿದರೂ[1] ಜನರು ತಮ್ಮ ತಮ್ಮ ಗುಡಾರಗಳಲ್ಲಿ ಮಲಗಿಕೊಂಡಿದ್ದರು. ೫ ಒಮ್ಮಿಂದೊಮ್ಮೆ[2] ನಾಲ್ಕು ಕಡೆಯಿಂದ[3] ತೋಫುಗಳ ಸಪ್ಪಳವು ಕೇಳಿಸಿತು. ೬ ರಾಜಪುತ್ರನು ತನ್ನ ಕತ್ತಿಯಿಂದ ಅನೇಕ ಜನರನ್ನು ಕೊಂದನು. ೭ ಆಕೆಯ ದುಃಖದ ಕಾರಣವು ಎಲ್ಲರಿಗೂ ತಿಳಿಯಿತು[4]. ೮ ನೀನು ಬರುತ್ತೀಯಾ? ೯ ಗುಬ್ಬಿಗಳು ನಿರ್ಮಲವಾದ ಸಣ್ಣ ಪಕ್ಷಿಗಳು. ೧೦ ಮಕ್ಕಳಿರಾ, ನೀವು ಗಿಳಿಗಳ ಹಾಗೆ ಅರ್ಥ ತಿಳುಕೊಳ್ಳದೆ ಕಲಿಯಬೇಡಿರಿ. ೧೧ ಇನ್ನು ಮೇಲೆ ನಾನು ನಿನಗೆ ನನ್ನ ಗೊಂಬೆಯನ್ನು ಕೊಡುವದಿಲ್ಲ. ೧೨ ಬಳಿಕ ಒಕ್ಕಲಿಗನು ಆ ಹಾವನ್ನು ಬೆಂಕಿಯ ಸಮೀಪದಲ್ಲಿ ಇಟ್ಟನು. ೧೩ ಕಾಜು ಬಹು ತೀವ್ರ ಒಡೆಯುವಂಥ ಪದಾರ್ಥವು. ೧೪ ಮಾನವು ಕಾಜಿನ ಪಾತ್ರೆಯಂತೆ ಅದೆ. ೧೫ ಅವನ ಹತ್ತರ ಬಟ್ಟೆಬರೆಗಳೇನೂ[5] ಇದ್ದಿಲ್ಲ. ೧೬ ಕಟುಕರವನು ಆ ಆಕಳ ಕಾಲುಗಳನ್ನು ಹಗ್ಗದಿಂದ ಕಟ್ಟಿದನು. ೧೭ ಶಿಕ್ಷಕನು ಆ ಹುಡುಗನಿಗೆ ಉತ್ತಮ ಪುಸ್ತಕಗಳನ್ನು ಇನಾಮು ಕೊಟ್ಟನು. ೧೮ ನಾನು ಹಾಲು ಕುಡಿದೆನು. ೧೯ ನಾವು ಶಾಲೆಯಲ್ಲಿ ಇಂಗ್ಲಿಷ ಭಾಷೆಯನ್ನು ಕಲಿತೆವು. ೨೦ ಅವನು ಮನೆಯಲ್ಲಿದ್ದನು. ೨೧ ಅವನು ಮನೆಗೆ ಹೋದನು. ೨೨ ಅವನು ತನ್ನ ಚಿಕ್ಕಪ್ಪನ ಮನೆಯಲ್ಲಿರುತ್ತಾನೆ. ೨೩ ಅವನು ಆಕೆಗೆ ಮನಸಿಗೆ ಹತ್ತುವಂಥ ಮಾತುಗಳನ್ನಾಡಿದನು. ೨೪ ನೀನು ನಿನ್ನ ಕತ್ತಿಯನ್ನು ಯಾಕೆ ತಿರುವುತ್ತಿ[6]? ೨೫ ಇಬ್ಬರು ಹಾದಿಕಾರರು ಕೂಡಿ ನಡೆದಿದ್ದರು. ೨೬ ಹುಡುಗನು ಪಾಠವನ್ನು ಶಿಕ್ಷಕನಿಂದ ಹೇಳಿಸಿಕೊಳ್ಳುತ್ತಾನೆ. ೨೭ ಹೋದ ವರುಷ ಆ ಮನೆ ಕಟ್ಟಿತ್ತು. ೨೮ ಈ ಭೂಮಂಡಲದಲ್ಲಿರುವ ಯಾವತ್ತೂ ಪ್ರಾಣಿಗಳು ದೇವರಿಂದ ರಕ್ಷಿಸಲ್ಪಡುತ್ತವೆ. ೨೯ ಕಾಲಿದಾಸನಿಂದ ಶಾಕುಂತಲ ನಾಟಕವು ರಚಿಸಲಾಯಿತು. ೩೦ ಆ ಸಾವುಕಾರನಲ್ಲಿ ಐನೂರು ರೂಪಾಯಿ ತಂದವೆ. ೩೧ ಅಕ್ಕಾ, ಈ ಹೊತ್ತು ದಿವಾನ ಶ್ರೀನಿವಾಸರಾಯರಿಗೆ ಊಟಕ್ಕೆ ಹೇಳಿಯದೆ.

### ಭಾಷಾಂತರಪಾಠ ೨೬.

## ನಾನಾತರದ ವಾಕ್ಯಗಳು Miscellaneous Sentences.

೧೫೩. 1 How late is it! 2 It is still early, it is not yet nine o'clock. 3 We shall go out at half past nine. 4 The postman will come at a quarter past nine. 5 It is now ten minutes to nine. 6 I came home last night

1) Everywhere on all sides. 2) All of a sudden. 3) ನಾಲ್ಕು ಕಡೆಯಿಂದ = on all sides. 4) Became known. 5) Clothes, clothing. 6) ಕತ್ತಿ ತಿರುವು = to flourish a sword.

at twenty minutes to twelve. 7 I then went to bed[1] 8 I shall be at home by two o'clock[2]. 9 In some countries it rains almost every day in the autumn. 10 It is raining. 11 Yesterday it rained all day. 12 It was very cloudy yesterday morning. 13 It has not hailed for a long time. 14 Last week it was very sultry[3]. 15 On monday it rained and hailed for several hours. 16 It was very dark and windy. 17 The sun dose not shine now, but it is very hot. 18 It is quite sultry. 19 There is no wind at all. 20 The leaves on the trees do not move. 21 The sky looks very black, and how dark it is! 22 Ha! what a bright light shone through the room! 23 Now it is gone. 24 It did not last long. 25 What was it? 26 The soldiers surround the palace of the prince. 27 He has fallen into the enemy's hands. 28 They have taken the city by force. 29 I will wait for you at the corner of the street. 30 I teach those boys in the morning. 31 Your friends are expecting your arrival. 32 We shall reap the fruits of our labour. 33 My nephew writes to me every fortnight. 34 I had no money with me. 35 Are there many patriots[4] in that part of the country. 36 We shall take a long walk this afternoon. 37 We travelled all day. 38 I did not speak of[5] you. 39 The friends were sitting at the table[6]. 40 The inhabitants of this country live in beggarly[7] condition. 41 Good men always keep their word[8]. 42 He has had[9] many misfortunes. 43 Contentment is better than riches and honour. 44 The parents took the children with

1) To go to bed = ಮಲಗು. 2) ಎರಡು ಗಂಟೆಗೆ.
3) To be sultry = ಗಮ್ಮು ಕುಚ್ಚು. 4) ಸ್ವದೇಶಾಭಿಮಾನಿ.
5) ವಿಷಯಕ್ಕೆ. 6) ಊಟಕ್ಕೆ. 7) ಕೀಳ, ಕಂಗಾಲು.
8) ವಚನ, 9) ಬರು, ಒದಗು, ಸಂಭವಿಸು.

them. 45 I shall go to the fair this evening. 46 This gentleman has ruined himself entirely by gambling. 47 For what purpose are you going to Patna? 48 A true friend is one of the greatest blessing. 49 Prudent men some times conceal their motives. 50 Good luck does not last for ever. 51 Can wealth give happiness? 52 Look around you. 53 The errors of a wise man are more instructive[1] than the truths of a fool. 54 Give ear to my prayer and do not hide Thyself from my supplication.

1) ಬುದ್ಧಿ ಕಲಿಸುವಂಥ, ಬೋಧಕವುಳ್ಳ

# ಪುರವಣಿ.

# APPENDIX.

## ಶಬ್ದಖಂಡದ ಸಂಕ್ಷಿಪ್ತ ವರ್ಣನೆ.

## NOTES ON ACCIDENCE.

೧ ಇಂಗ್ಲಿಷದಲ್ಲಿ ಏಕವಚನದ ರೂಢನಾಮದ ಹಿಂದೆ ಯಾವದಾದರೊಂದು ಷಷ್ಠ್ಯಂತ ಶಬ್ದವಾಗಲಿ, ದರ್ಶಕಸರ್ವನಾಮವಾಗಲಿ, ಸಂಖ್ಯಾಪರಿಮಾಣವಾಚಕಗಳಾಗಲಿ ಇರದಿದ್ದರೆ, ಉಪಪದವು ಬೇಕು.

(ಅ) ಬಹುವಚನ ನಾಮಪದದ ಹಿಂದೆ an ಅಥವಾ a ಬರುವದಿಲ್ಲ.

(ಆ) ಅಂಕಿತನಾಮಗಳಿಗೂ ಭಾವವಾಚಕ ನಾಮಗಳಿಗೂ ಪದಾರ್ಥಗಳ ಹೆಸರುಗಳಿಗೂ ಬಹುತರವಾಗಿ ಉಪಪದವು ಬೇಕಾಗುವದಿಲ್ಲ.

(ಇ) ಕೆಳಗೆ ಬರೆದ ಸಿದ್ಧ ಶಬ್ದಗಳಲ್ಲಿಯೂ ಅವುಗಳಿಂದ ಹೊರಟ ಸಾಧಿತ ಶಬ್ದಗಳಲ್ಲಿಯೂ ಇರುವ ಮೊದಲನೇ *h* ದ ಉಚ್ಚಾರವಾಗುವದಿಲ್ಲ. ಮತ್ತು ಅವುಗಳ ಹಿಂದೆ an ಎಂಬ ಉಪಪದವು ಬರುತ್ತದೆ. ***Heir, honest, honour, hour, herb***

(ಈ) ನಾಮಪದದ ಆರಂಭದಲ್ಲಿ u ಎಂಬ ಅಕ್ಷರವಿದ್ದು ಅದರ ಉಚ್ಚಾರ 'ಯು' ಆಗುತ್ತಿದ್ದರೆ, ಅದರ ಹಿಂದೆ a ಎಂಬ ಉಪಪದವನ್ನು ಹಾಕಬೇಕು.

೨ ನಾಮಪದಗಳ ಲಿಂಗಗಳ ಬಗ್ಗೆ ಇಂಗ್ಲಿಷದಲ್ಲಿರುವ ನಿಯಮವೇನಂದರೆ- ಪ್ರಾಣಿವಾಚಕ ಶಬ್ದಗಳಲ್ಲಿ ಪುರುಷ ಜಾತಿಯವು ಪುಲ್ಲಿಂಗವೆಂತಲೂ, ಸ್ತ್ರೀಜಾತಿಯವು ಸ್ತ್ರೀಲಿಂಗವೆಂತಲೂ, ನಿರ್ಜೀವ ಪದಾರ್ಥಗಳೆಲ್ಲ ನಪುಂಸಕಲಿಂಗವೆಂತಲೂ ತಿಳುಕೊಳ್ಳಬೇಕು.

(ಅ) ಲಿಂಗದ ಕಡೆಗೆ ಲಕ್ಷ್ಯಕೊಡದೆ ಯಾವದಾದರೊಂದು ಪಶುವಿನ ವಿಷಯಕ್ಕೆ ಸಾಧಾರಣವಾಗಿ ಮಾತಾಡುವದಾದರೆ, ಆ ನಾಮಪದವು ನಪುಂಸಕಲಿಂಗವೆಂದು ತಿಳುಕೊಳ್ಳಬೇಕು.

(ಆ) ಪಕ್ಷಿಗಳ ಹೆಸರುಗಳು ಬಹುತರವಾಗಿ ಸ್ತ್ರೀಲಿಂಗದಲ್ಲಿರುತ್ತವೆ; ಆದರೆ ಕೆಲವು ಪುಲ್ಲಿಂಗದಲ್ಲಿ ಸಹ ಕಾಣಬಹುದು.

(ಇ) ಮೀನುಗಳ ಹೆಸರುಗಳು ಬಹುತರವಾಗಿ ಪುಲ್ಲಿಂಗಧಲ್ಲಿರುತ್ತವೆ.

(ಈ) ಕ್ರಿಮಿಕೀಟಕಾದಿಗಳ ಲಿಂಗದ ವಿಷಯಕ್ಕೂ ಗಿಡಗಳ ಲಿಂಗದ ವಿಷಯಕ್ಕೂ ನಿಯಮವನ್ನು ಹೇಳಕೂಡದು; ಆದರೆ ಸಾಧಾರಣವಾಗಿ ನಪುಂಸಕಲಿಂಗವನ್ನು ಪ್ರಯೋಗಿಸಬಹುದು.

(ಉ) Time, the sun, death, love, sleep summer ಮುಂತಾದ ನಾಮಪದಗಳನ್ನು ಅಲಂಕಾರಿಕ ಭಾಷೆಗೆ ಅನುಸಾರವಾಗಿ ಪುಲ್ಲಿಂಗದವೆಂದು ಎಣಿಸುತ್ತಾರೆ. ಇದೇ ಮೇರೆಗೆ The moon, the earth, virtue, night, a ship, a country ಮುಂತಾದವುಗಳು ಸ್ತ್ರೀಲಿಂಗದವೆಂದು ತಿಳಿಯಬೇಕು.

(ಊ) ಹಲವು ನಾಮಪದಗಳ ಸ್ತ್ರೀಲಿಂಗವು ess ಎಂಬ ಪ್ರತ್ಯಯವನ್ನು ಹಚ್ಚುವದರಿಂದ ಆಗುತ್ತದೆ. ಉದಾ— a lion, a lioness.

ನಾಮಪದಕ್ಕೆ *s* ಎಂಬ ಪ್ರತ್ಯಯವನ್ನು ಹಚ್ಚುವದರಿಂದ ಬಹು ವಚನವಾಗುತ್ತದೆ.

(ಅ) ಅಂತ್ಯದಲ್ಲಿ *s*, *sh*, *ch* (ಚ್), *x* ಅಥವಾ *z* ಇದ್ದರೆ *es* ಎಂಬ ಪ್ರತ್ಯಯವು ಹತ್ತುತ್ತದೆ

(ಆ) ಉಪಾಂತ್ಯಾಕ್ಷರವು ವ್ಯಂಜನವಿದ್ದು, ಅಂತ್ಯಾಕ್ಷರವು *y* ಎಂಬದೂ ಇರಲಾಗಿ *es* ಎಂಬ ಪ್ರತ್ಯಯವು ಹತ್ತುತ್ತದೆ. ಮತ್ತು ಅದನ್ನು ಹಚ್ಚುವಾಗ *y* ಗೆ *i* ಆದೇಶವಾಗುತ್ತದೆ.

(ಇ) ಉಪಾಂತ್ಯಾಕ್ಷರವು ಸ್ವರವಿದ್ದು, ಅಂತ್ಯಾಕ್ಷರವು *o* ಎಂಬದೂ ಇರಲಾಗಿ *s* ಎಂಬ ಪ್ರತ್ಯಯವನ್ನು ಹಚ್ಚಬೇಕು; ಆದರೆ ಉಪಾಂತ್ಯಾಕ್ಷರವು ವ್ಯಂಜನವಿದ್ದರೆ *es* ಎಂಬದನ್ನು ಹಚ್ಚಬೇಕು. ಅಪವಾದಗಳು:—canto, quarto, cato.

(ಈ) ಕೆಲವು ನಾಮಪದಗಳ ಬಹುವಚನವು ನಿಯಮದಂತೆ ಆಗುವದಿಲ್ಲ. (ಮೊದಲನೇ ಪುಸ್ತಕ, ಪುಟ ೩೭ ನೋಡು.)

(ಉ) ಅಂಕಿತನಾಮ, ಭಾವವಾಚಕನಾಮ, ಪದಾರ್ಥಗಳ ಹೆಸರುಗಳು ಇವುಗಳ ಬಹುವಚನವಾಗುವದಿಲ್ಲ.

(ಊ) ರೂಢನಾಮ ಸಂಖ್ಯೆವಾಚಕ ನಾಮಗಳಿಗೆ ಮಾತ್ರ ಬಹುವಚನ ಉಂಟು.

೪ ವಿಭಕ್ತಿಗಳು ಐದು—ಪ್ರಥಮಾ, ದ್ವಿತೀಯಾ, ಚತುರ್ಥೀ, ಷಷ್ಠೀ, ಸಂಬೋಧನ.

(ಅ) ನಾಮಪದಗಳ ದ್ವಿತೀಯಾ ವಿಭಕ್ತಿಯು ಪ್ರಥಮೆಯಂತೆಯೇ ಇರುತ್ತದೆ.

(ಆ) ನಾಮಪದಗಳ ಹಿಂದೆ to ಅಥವಾ for ಎಂಬ ಅವ್ಯಯವು ಬರಲು ಚತುರ್ಥೀ ವಿಭಕ್ತಿಯಾಗುತ್ತದೆ. like, unlike, near ಎಂಬ ವಿಶೇಷಣಗಳ ಮುಂದೆ ಚತುರ್ಥೀ ಬರುತ್ತದೆ.

(ಇ) ಪ್ರಥಮೆಗೆ 's ಎಂಬ ಪ್ರತ್ಯಯವನ್ನು ಹಚ್ಚಿದರೆ ಷಷ್ಠೀ ವಿಭಕ್ತಿಯಾಗುತ್ತದೆ. ಏಕವಚನ ನಾಮಪದದ ಅಂತ್ಯದಲ್ಲಿ ss, ಇಲ್ಲವೆ ಬಹುವಚನದ ಅಂತ್ಯದಲ್ಲಿ s ಇದ್ದರಲಾಗಿ, ಬರೇ ' ಈ ಗುರುತು ಹಾಕಬೇಕು. ಒಮ್ಮೊಮ್ಮೆ ಏಕವಚನ ನಾಮಪದದ ಅಂತ್ಯದಲ್ಲಿ 'ಸ' ಕಾರ ಉಚ್ಚಾರವಿದ್ದಾಗ ಸಹ ಬರೇ ' ಈ ಗುರುತನ್ನೇ ಹಾಕುತ್ತಾರೆ. ಉದಾ:—

For righteousness' sake; the boys' slates; for conscience' sake.

ಇದಲ್ಲದೆ ನಾಮಪದದ ಹಿಂದೆ of ಎಂಬ ಉಪಸರ್ಗಾವ್ಯಯವನ್ನು ಇಟ್ಟು ಷಷ್ಠೀ ವಿಭಕ್ತಿಯನ್ನು ಮಾಡುವರು.

(ಈ) ನಾಮಪದದ ಹಿಂದೆ O ಎಂಬ ಸಂಬೋಧಕಾವ್ಯಯವು ಬಂದರೆ ಸಂಬೋಧನವಾಗುತ್ತದೆ; ಅದು ಬರೇ ನಾಮಪದದಿಂದ ಸಹ ಆಗಬಹುದು.

೫ ನಾಮಪದಗಳನ್ನು ನಡಿಸುವ ರೀತಿ—

### A king ಅರಸು.

| | ಏಕವಚನ. | ಬಹುವಚನ. |
|---|---|---|
| ಪ್ರ. | A king | kings. |
| ದ್ವಿ. | A king | kings. |
| ಚ. | To ಅಥವಾ *for* a king | To ಅಥವಾ *for* kings. |
| ಷ. | A king's ಅಥವಾ *of* a king | kings' ಅಥವಾ *of* kings. |
| ಸಂಬೋಧನ | O king! ಅಥವಾ king! | O kings! ಅಥವಾ kings. |

೬ ಪುರುಷಾರ್ಥಕ ಸರ್ವನಾಮಗಳು—I ನಾನು thou ನೀನು.

| | ಪ್ರಥಮ ಪುರುಷ. | | | ದ್ವಿತೀಯ ಪುರುಷ. | |
|---|---|---|---|---|---|
| | ಏಕವಚನ. | ಬಹುವಚನ. | | ಏಕವಚನ. | ಬಹುವಚನ. |
| ಪ್ರ. | I | We | ಪ್ರ. | Thou | You. |
| ದ್ವಿ. | Me | Us | ದ್ವಿ. | Thee | You. |
| ಚ. | To ಅಥವಾ *for* me | To ಅ. *for* us | ಚ. | To ಅಥವಾ *for* thee | To ಅ. *for* you. |
| ಷ. | My ಅಥವಾ mine | Our ಅ. ours | ಷ. | Thy ಅಥವಾ thine | Your ಅ. yours. |
| | | | ಸ. | O thou ಅ. thou | O you ಅ. you. |

೭ ದರ್ಶಕ ಸರ್ವನಾಮಗಳು—he ಅವನು, she ಅವಳು, it ಅದು, this ಈ, ಇವನು, ಇವಳು ಇದು. that ಆ, ಅವನು. ಅವಳು, ಅದು. such ಇಂಥ, so ಇಂಥ, yonder ಅತ್ತಕಡೆಯ, the same ಅದೇ.

#### ತೃತೀಯ ಪುರುಷ.

| | ಏಕವಚನ. | | | ಬಹುವಚನ. |
|---|---|---|---|---|
| | ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. | ಪು. ಸ್ತ್ರೀ. ನ. |
| ಪ್ರ. | He | She | It | They. |
| ದ್ವಿ. | Him | Her | It | Them. |
| ಚ. | To ಅಥವಾ *for* him | To ಅ. *for* her | To ಅಥವಾ *for* it | To ಅ. *for* them. |
| ಷ. | His | Her ಅಥವಾ hers | Its | Their ಅಥವಾ theirs. |

This, that ಎಂಬವುಗಳ ಬಹುವಚನಗಳು these, those ಆಗುತ್ತವೆ.

೮ ಪ್ರಶ್ನಾರ್ಥಕ ಸರ್ವನಾಮಗಳು—Who ಯಾರು, which ಯಾವ, what ಏನು, ಎಂಥ, ಯಾವ, ಎಲ್ಲಿಯ.

| | ಪ್ರ. | ದ್ವಿ. | ಚ. | ಷ. |
|---|---|---|---|---|
| ಏಕವಚನ | Who | Whom | To ಅ. *for* whom | Whose. |
| ಬಹುವಚನ | ,, | ,, | ,, ,, | ,, |

೯ *Er, est* ಎಂಬ ಪ್ರತ್ಯಯಗಳು ವಿಶೇಷಣಗಳ ತಾರತಮ್ಯಭಾವವನ್ನು ತೋರಿಸುತ್ತವೆ.

( ಅ ) ಎರಡು ಅಥವಾ ಹೆಚ್ಚು ಅವಯವಗಳುಳ್ಳ ವಿಶೇಷಣಗಳ ಹಿಂದೆ **more, most** ಎಂಬ ಕ್ರಿಯಾವಿಶೇಷಣಗಳನ್ನು ಉಪಯೋಗಿಸಬೇಕು.

( ಆ ) ಕೆಲವು ವಿಶೇಷಣಗಳ ರೂಪಗಳು ನಿಯಮದಂತೆ ಆಗುವದಿಲ್ಲ.

| *Positive.* | *Comparative.* | *Superlative.* |
|---|---|---|
| **Good,** | **better.** | **best** |
| **Bad, ill,** | **worse** | **worst** |
| **Little,** | **less,** | **least** |
| **Much,** | **more,** | **most** |
| **Many,** | **more,** | **most** |
| **Old** | **older, elder,** | **oldest, eldest** |
| **Near,** | **nearer,** | **nearest, next.** |
| **Late,** | **later, latter,** | **latest, latest.** |

೧೧ ಕ್ರಿಯಾಪದಗಳ ಗಣಗಳು ಎರಡು. ವರ್ತಮಾನಕಾಲಕ್ಕೆ *ed* ಅಥವಾ *d* ಎಂಬ ಪ್ರತ್ಯಯ ಹತ್ತಿ ಭೂತಕಾಲ ಭೂತಕೃದ್ವಾಚಕಗಳಾಗುವಂಥವು **Weak Conjugation** ದವು; ಮತ್ತು ಕ್ರಿಯಾಪದಗಳ ಮೂಲರೂಪದಲ್ಲಿ ಹೆಚ್ಚು ಕಡಿಮೆಯಾಗಿ ಭೂತಕಾಲ ಇಲ್ಲವೆ ಭೂತಕೃದ್ವಾಚಕಗಳಾಗುವಂಥವು **Strong Conjugation** ದವು ಎಂದು ತಿಳುಕೊಳ್ಳಬೇಕು.

( ಅ ) ಕೆಲವು ಕ್ರಿಯಾಪದಗಳು ಸಕರ್ಮಕ ಕೆಲವು ಅಕರ್ಮಕ ಇರುತ್ತವೆ.

( ಆ ) ಪ್ರಯೋಗಗಳು ಎರಡು-ಕರ್ತರಿ, ಕರ್ಮಣಿ. ಸಕರ್ಮಕ ಕ್ರಿಯಾಪದಗಳಿಂದ ಕರ್ಮಣಿ ಪ್ರಯೋಗವು ಬಹುತರವಾಗಿ ಎಲ್ಲ ಕಾಲಗಳಲ್ಲಿ ಆಗುತ್ತದೆ.

( ಇ ) ಅರ್ಥಗಳು ನಾಲ್ಕು-ಸಂಭವಾರ್ಥ, ವಿಧ್ಯರ್ಥ, ಸಂಕೇತಾರ್ಥ, **Infinitive Mood** (ಭಾವರೂಪ).

(ಈ) ಕಾಲಗಳು ಮುಖ್ಯವಾಗಿ ಮೂರು—ವರ್ತಮಾನ, ಭೂತ, ಭವಿಷ್ಯತ್ತು. ಆದರೆ ಇವುಗಳಲ್ಲಿ ಅನೇಕ ಪ್ರಕಾರಗಳುಂಟು.

(ಉ) ಕರ್ತರಿ ಪ್ರಯೋಗದಲ್ಲಿ ಕರ್ತೃಪದದ ಪುರುಷ ವಚನಗಳು ಕ್ರಿಯಾಪದಕ್ಕೆ ಹತ್ತುತ್ತವೆ. ಕರ್ಮಣಿ ಪ್ರಯೋಗದಲ್ಲಿ ಕರ್ಮದ ಪುರುಷ ವಚನಗಳು ಕ್ರಿಯಾಪದಕ್ಕೆ ಹತ್ತುತ್ತವೆ.

೧೧ To have 'ಹತ್ತರ ಇರು', To be 'ಇರು' ಎಂಬ ಧಾತುಗಳ ಕ್ರಿಯಾಪದಗಳು ನಿಯಮದಂತೆ ನಡೆಯುವದಿಲ್ಲ. ಆದುದರಿಂದ ಮೊದಲು ಅವುಗಳನ್ನು ಮುಖ್ಯವಾದ ಕಾಲಗಳಲ್ಲಿ ಕೆಳಗೆ ನಡಿಸಿ ತೋರಿಸಿದ್ದೇವೆ.

## To have 'ಹತ್ತರ ಇರು'.

### ಸಂಭವಾರ್ಥ Indicative Mood

#### ವರ್ತಮಾನಕಾಲ *Present Tense*

| | ಏಕವಚನ. | ಬಹುವಚನ. |
|---|---|---|
| 1) | I have | We have |
| 2) | Thou hast | You have |
| 3) | He has | They have |

#### ಭೂತಕಾಲ *Past Tense*

| | | |
|---|---|---|
| 1) | I had | We had |
| 2) | Thou hadst | You had |
| 3) | He had | They had |

#### ಭವಿಷ್ಯತ್ಕಾಲ *Future Tense*

| | | |
|---|---|---|
| 1) | I shall have | We shall have |
| 2) | Thou wilt have | You will have |
| 3) | He will have | They will have |

#### ಪೂರ್ಣ ವರ್ತಮಾನಕಾಲ *Present Perfect*

| | | |
|---|---|---|
| 1) | I have had | We have had |
| 2) | Thou hast had | You have had |
| 3) | He has had | They have had |

**ವಿಧ್ಯರ್ಥ Imperative Mood** ( ದ್ವಿತೀಯ ಪುರುಷದಲ್ಲಿ ಮಾತ್ರ )

| | ಏಕವಚನ | ಬಹುವಚನ |
|---|---|---|
| 2 | Have<br>Have thou<br>Do have | Have<br>Have you<br>Do have |

**To be ' ಇರು '**

**ಸಂಭವಾರ್ಥ Indicative Mood**

ವರ್ತಮಾನಕಾಲ *Present Tense*

| | ಏಕವಚನ | ಬಹುವಚನ |
|---|---|---|
| 1 ) | I am | We are |
| 2 ) | Thou art | You are |
| 3 ) | He is | They are |

ಭೂತಕಾಲ *Past Tense*

| | | |
|---|---|---|
| 1 ) | I was | We were |
| 2 ) | Thou wast | You were |
| 3 ) | He was | They were |

ಭವಿಷ್ಯತ್ಕಾಲ *Future Tense*

| | | |
|---|---|---|
| 1 ) | I shall be | We shall be |
| 2 ) | Thou wilt be | You will be |
| 3 ) | He will be | They will be |

ಪೂರ್ಣವರ್ತಮಾನಕಾಲ *Present Perfec*

| | | |
|---|---|---|
| 1 ) | I have been | We have been |
| 2 ) | Thou hast been | You have been |
| 3 ) | He has been | They have been |

ವಿಧ್ಯರ್ಥ **Imperative Mood**

2 Be, Be thou, De be. Be, Be you, Do be.

೧೨ ನಿಯಮಕ್ಕೆ ಅನುಸಾರವಾಗಿ ನಡೆಯುವಂಥ ಎಲ್ಲ ತರದ ಕ್ರಿಯಾಪದಗಳನ್ನು ನಡಿಸಲಿಕ್ಕೆ ಬರಬೇಕೆಂಬದಾಗಿ, to write ' ಬರೆ ' ಎಂಬ ಕ್ರಿಯಾಪದವನ್ನು ಸಂಭವಾರ್ಥದಲ್ಲಿಯೂ ವಿಧ್ಯರ್ಥದಲ್ಲಿಯೂ ಕೆಲವು ಕಾಲಗಳಲ್ಲಿ ಕೆಳಗೆ ನಡ್ಸಿ ತೋರಿಸಿದ್ದೇವೆ.

# ಕರ್ತರಿ ಪ್ರಯೋಗ.

## ACTIVE VOICE.

### ಸಂಭವಾರ್ಥ Indicative Mood

ಅನಿಯಮಿತ ವರ್ತಮಾನಕಾಲ *Present Indefinite*

| ಏಕವಚನ | ಬಹುವಚನ |
|---|---|
| 1) I write | We write. |
| 2) Thou writest | You write |
| 3) He writes | They write |

ಅಪೂರ್ಣವರ್ತಮಾನಕಾಲ *Present Imperfect*

| | |
|---|---|
| 1) I am writing | We are writing |
| 2) Thou art writing | You are writing |
| 3) He is writing | They are writing |

ಪೂರ್ಣವರ್ತಮಾನಕಾಲ *Present Perfect*

| | |
|---|---|
| 1) I have written | We have written |
| 2) Thou hast written | You have written |
| 3) He has written | They have written |

ನಡೆಯುತ್ತಿರುವ ಪೂರ್ಣ ವರ್ತಮಾನ *Present Perfect Continuous*

| | |
|---|---|
| 1) I have been writing | We have been writing |
| 2) Thou hast been writing | You have been writing |
| 3) He has been writing | They have been writing |

ಈ ಕಾಲದ ಅರ್ಥವು ಕನ್ನಡದಲ್ಲಿ ರೀತಿವರ್ತಮಾನಕಾಲದಂತೆ[1] ಆಗುತ್ತದೆ. ಹೇತು ತೋರಿಸುವಂಥ ಕಾಲಗಳ ಉಪಯೋಗವನ್ನು ಈ ಪುಸ್ತಕದಲ್ಲಿ ಮಾಡಿಲ್ಲ. ಆದುದರಿಂದ ಅವುಗಳ ರೂಪಗಳನ್ನು ಇಲ್ಲಿ ಕೊಟ್ಟಿಲ್ಲ. ಇದೇ ಕಾರಣದಿಂದ ಭೂತ ಭವಿಷ್ಯತ್ಕಾಲದೊಳಗಿನ ಕೆಲವು ಪ್ರಕಾರಗಳ ರೂಪಗಳನ್ನು ಬರೆಯಲಿಲ್ಲ.

ಅನಿಯಮಿತ ಭೂತಕಾಲ *Past Indefinite*

| ಏಕವಚನ | ಬಹುವಚನ |
|---|---|
| 1) I wrote | We wrote |
| 2) Thou wrotest | You wrote |
| 3) He wrote | They wrote |

1) ಪುಸ್ತಕ ೧, ಪುಟ ೩೦ ನೋಡು.

ಅಪೂರ್ಣ ವರ್ತಮಾನಕಾಲ *Past Imperfect*

| ಏಕವಚನ | ಬಹುವಚನ |
|---|---|
| 1) I was writing | We were writing |
| 2) Thou wast writing | You were writing |
| 3) He was writing | They were writing |

ಅನಿಯಮಿತ ಭವಿಷ್ಯತ್ಕಾಲ *Future Indefinite*

| | |
|---|---|
| 1) I shall write | We shall write |
| 2) Thou wilt write | You will write |
| 3) He will write | They will write |

ಪ್ರಥಮ ಪುರುಷದಲ್ಲಿ ನಿಶ್ಚಯ, ಇಚ್ಛೆ ಇಲ್ಲವೆ ವಚನವನ್ನು ಸೂಚಿಸುವದಾದರೆ *I will write* ಅನ್ನಬೇಕು.

ವಿಧ್ಯರ್ಥ Imperative Mood

| | | |
|---|---|---|
| 2 | Write<br>Do write<br>Write thou | write<br>Do write<br>You write |

To call ಕರೆ.

## ಕರ್ಮಣಿ ಪ್ರಯೋಗ.

## PASSIVE VOICE.

ಸಂಭವಾರ್ಥ Indicative Mood

ಅನಿಯಮಿತ ವರ್ತಮಾನಕಾಲ *Present Indifinite*

| | |
|---|---|
| 1) I am called | We are called |
| 2) Thou art called | You are called |
| 3) He is called | They are called |

ಅಪೂರ್ಣ ವರ್ತಮಾನಕಾಲ *Present Imperfect*

| | |
|---|---|
| 1) I am being called | We are being called |
| 2) Thou art being called | You are being called |
| 3) He is being called | They are being called |

ಪೂರ್ಣ ವರ್ತಮಾನಕಾಲ *Present Perfect*

| | |
|---|---|
| 1) I have been called | We have been called |
| 2) Thou hast been called | You have been called |
| 3) He has been called | They have been called |

### ಅನಿಯಮಿತ ಭೂತಕಾಲ *Past Indefinite*

| ಏಕವಚನ | ಬಹುವಚನ |
|---|---|
| 1 I was called | We were called, |
| 2 Thou wast called | You were called. |
| 3 He was called | They were called. |

### ಅಪೂರ್ಣ ಭೂತಕಾಲ *Past Imperfect*

| | |
|---|---|
| 1 I was being called | We were being called. |
| 2 Thou wast being called | You were being called. |
| 3 He was being called | They were being called. |

### ಅನಿಯಮಿತ ಭವಿಷ್ಯತ್ಕಾಲ *Future Indefinite*

| | |
|---|---|
| 1 I shall be called | We shall be called. |
| 2 Thou wilt be called | You will be called. |
| 3 He will be called | They will be called. |

### ವಿಧ್ಯರ್ಥ Imperative Mood

| | |
|---|---|
| 2 { Be (thou) called<br>Do be called. | { Be (you) called.<br>Do be called. |

ಇದೇ ಮೇರೆಗೆ ಬೇರೆ ಕ್ರಿಯಾಪದಗಳನ್ನು ನಡಿಸಬೇಕು. ಆದರೆ ಅಕರ್ಮಕ ಕ್ರಿಯಾಪದಗಳಿಂದ ಕರ್ಮಣಿ ಪ್ರಯೋಗವಾಗುವದಿಲ್ಲೆಂಬ ಮಾತು ಚೆನ್ನಾಗಿ ನೆನಪಿನಲ್ಲಿಡಬೇಕು.

೧೩. ಎಷ್ಟೋ ಕ್ರಿಯಾವಿಶೇಷಣಗಳು ಗುಣವಾಚಕ ವಿಶೇಷಣಗಳಿಗೆ *ly* ಎಂಬ ಪ್ರತ್ಯಯವು ಹತ್ತಿ ಆಗಿರುತ್ತವೆ. True, due ಇವುಗಳಿಂದ truly duly ಎಂಬ ರೂಪಗಳಾಗುತ್ತವೆ.

(ಅ) ಕ್ರಿಯಾವಿಶೇಷಣಗಳ ತಾರತಮ್ಯಭಾವವು *more, most* ಎಂಬ ಶಬ್ದಗಳಿಂದ ಆಗುತ್ತದೆ, ಕೆಲವುಗಳಿಗೆ *er. est* ಎಂಬ ಪ್ರತ್ಯಯಗಳು ಹತ್ತುತ್ತವೆ; ಕೆಲವುಗಳ ರೂಪಗಳು ನಿಯಮದಂತೆ ಆಗುವದಿಲ್ಲ.

೧೪. ಉಪಸರ್ಗಾವ್ಯಯಗಳು ಇಂಗ್ಲಿಷದಲ್ಲಿ ನಾಮಪದದ ಅಥವಾ ಸರ್ವನಾಮದ ಹಿಂದೆ ಬರುತ್ತವೆ. ಮತ್ತು ಆ ನಾಮಪದವಾಗಲಿ ಸರ್ವನಾಮವಾಗಲಿ Objective Case ಆಗುತ್ತವೆ.

೧೫ ಉಪಪದವಿರತಕ್ಕ ಸ್ಥಾನ—

ನಾಮಪದದ ಹಿಂದೆ ವಿಶೇಷಣವಿದ್ದರೆ, ಉಪಪದವು ಆ ವಿಶೇಷಣದ ಹಿಂದೆ ಬರುತ್ತದೆ. ಆದರೆ ಮುಂದಿನ ಉದಾಹರಣೆಗಳಲ್ಲಿ ಅದರ ಸ್ಥಾನವು ಚೆನ್ನಾಗಿ ನೆನಪಿನಲ್ಲಿಡುವಂತೆ ಆದೆ.

| | |
|---|---|
| ಇಷ್ಟು ಜಾಣ ಅರಸು[1] | so wise *a* king. |
| ಇಷ್ಟು ಜಾಣ ಅರಸು | such *a* wise king. |
| ಎಷ್ಟು ಒಳ್ಳೇ ಮಾತು ! | what *a* good thing. |
| ಆ ಮನುಷ್ಯರೆಲ್ಲರು | all *the* men. |

---

## ೨ ಕನ್ನಡ-ಇಂಗ್ಲಿಷ ಭಾಷಾಪದ್ಧತಿಗಳು.

## KANNADA & ENGLISH IDIOMS.

| ಕನ್ನಡ. | ಇಂಗ್ಲಿಷ. |
|---|---|
| ೧ ಅವನು ತನ್ನ ಅಂಗಡಿಯನ್ನು ಹಾಕುತ್ತಾನೆ. | He shuts *his* shop. |
| ೨ ನಾವು (ಅಥವಾ ನಾವೇ) ಇದ್ದೇವೆ. | It *is* we. |
| ೩ ಅವನ ಹೆತ್ತರ ಲೆಕ್ಕಣಿಕೆ ಅದೆ | He *has* a pen. |
| ಅವನಿಗೆ ಮೂರು ಮಂದಿ ಮಕ್ಕಳು ಇದ್ದಾರೆ. | He *has* three sons |
| ೪ ಪಕ್ಷಿಗಳಿಗೆ ರೆಕ್ಕೆಗಳಿವೆ. | Birds *have* wings. |
| ೪ ನನಗೆ ವ್ಯಸನವಾಗುತ್ತದೆ. | I *am sorry*. |
| ೫ ಅವನು ನನ್ನ ಕೂಡ ದ್ವೇಷ ಮಾಡುತ್ತಾನೆ. | He *hates* me. |
| ಅವನಿಗೆ ನಾನು ಮಾತು ಕೊಟ್ಟಿದ್ದೇನೆ. | I *have promised him*. |
| ನಾನು ನಿನ್ನ ಮೇಲೆ ಪ್ರೀತಿ ಮಾಡುತ್ತೇನೆ. | I *love you*. |
| ೬ ನನಗೆ ಹಾಲು ಸೇರುತ್ತದೆ. | I like milk. |
| ನನಗೆ ಹಾಲು ಬೇಕು. | I want milk. |
| ನನಗೆ ಇದು ನೆನಪದೆ. | I remember this. |
| ೭ ವ್ಯಾಪಾರವು ಚೆನ್ನಾಗಿ ನಡೆದದೆ. | Trade *is flourishing*. |
| ೮ ಸ್ವಲ್ಪ ದೀಪಾ ಹಚ್ಚುತ್ತೀಯಾ ? | *Will* you light the lamp ? |

1) ಇಷ್ಟು ಜಾಣ ಅರಸರು, ಇಂಥ ಜಾಣ ಅರಸರು = *Such* wise kings.

| | ಕನ್ನಡ. | ಇಂಗ್ಲಿಷ |
|---|---|---|
| ೯ | ಎಷ್ಟು ಮಂದಿ ಗಂಡಸರು ? | *How many* men ? |
| | ಎಷ್ಟು ಸಕ್ಕರೆ ? | *How much* sugar ? |
| | ಇಷ್ಟು ಮಾವಿನ ಹಣ್ಣುಗಳು. | *So many* mangoes. |
| | ಇಷ್ಟು ಸಕ್ಕರೆ. | *So much* sugar. |
| ೧೦ | ನೀನು ನನ್ನ ಮಾತು ಮೀರುತ್ತೀ. | You disobey me. |
| | ನಾನು ಅವನ ಗೊಡವೆಗೆ ಹೋಗುವದಿಲ್ಲ. | I do not interfere with *him.* |
| ೧೧ | ಬೆಳ್ಳಿಗಿಂತ ಬಂಗಾರವು ತುಟ್ಟಿ ಇರುತ್ತದೆ. | Gold is dearer than silver. |
| | ನಿನ್ನ ಅಂಗಿಯು ನಿನ್ನ ತಮ್ಮನ ಅಂಗಿಗಿಂತ ದೊಡ್ಡದು. | Your coat is *bigger than* your brother's. |
| ೧೨ | ನಿನ್ನ ವಯಸ್ಸು ಎಷ್ಟು ? | *How old are you ?* |
| | ಕೂಸು ಮೂರು ವರ್ಷದ್ದು. | The child is *three years old.* |
| ೧೩ | ನಿನ್ನ ಮಾತು ಸರಿ. | *You* are right. |
| ೧೪ | ಅವನು ಓಡಿ ಹೋದನು. | He *ran away.* |
| ೧೫ | ಈ ಪೆಟ್ಟಿಗೆಗೆ ಏನು ಬೆಲೆ ಬಂದೀತು? | What will this *box* fetch ? |
| ೧೬ | ಇಷ್ಟು ಹೊತ್ತು ನೀವು ಎಲ್ಲಿ ಇದ್ದಿರಿ ? | Where *have you been all this time ?* |
| ೧೭ | ಅವನು ಚಾಪೆಯ ಮೇಲೆ ಕೂತಿದ್ದಾನೆ. | He *is sitting* on a mat. |
| | ಅವನು ನಿಂತಿದ್ದಾನೆ. | He *is standing.* |
| ೧೮ | ನೀನು ಹೊತ್ತು ಮಾಡಿ ಬಂದೆ | You *are late.* |
| | ಈಗ ತಡವಾಯಿತು | It *is now late.* |
| ೧೯ | ಮಳೆ ಬೀಳುತ್ತಾ ಇದೆ. | It *is raining* |
| | ಕತ್ತಲೆ ಬಿದ್ದದೆ. | It *is dark.* |
| | ಸಾಯಂಕಾಲವಾಯಿತು. | It *is evening* |
| ೨೦ | ಎಷ್ಟು ಗಂಟೆಯಾಯಿತು ? | *What o'clock is it* |
| | ಆರು ಗಂಟೆಯಾಯಿತು. | It *is six o'clock* |
| | ಕಾಲು ಕಡಿಮೆ ಒಂಬತ್ತಾಯಿತು. | It *is a quarter to nine* |
| ೨೧ | ನನಗೆ ಹಸಿವೆಯಾಗಿದೆ. | I *am hungry.* |

# ೩ ಪ್ರಶ್ನಗಳು.

## QUESTIONS.

☞ ಕಂಸಗಳಲ್ಲಿರುವ ಅಂಕಿಗಳು ಪುಸ್ತಕದೊಳಗಿನ ಕಲಮುಗಳೆಂದು ತಿಳುಕೊಳ್ಳಬೇಕು.

೧ ಇಂಗ್ಲಿಷ ಕ್ರಿಯಾಪದಗಳ ಕರ್ತೃಪದವನ್ನು ಕನ್ನಡದಲ್ಲಿ ಚತುರ್ಥೀ ಮಾಡಬೇಕಾಗುವಂಥ ಕೆಲವು ಕ್ರಿಯಾಪದಗಳನ್ನು ಹೇಳು. (೨)

೨ To remember ಮತ್ತು to recollect ಎಂಬ ಶಬ್ದಗಳಲ್ಲಿ ಭೇದವೇನು? (೨)

೩ ವರ್ತಮಾನಕಾಲದಲ್ಲಿ ನಿಷೇಧರೂಪಗಳು ಹೇಗಾಗುತ್ತವೆ? (೧೧)

೪ Live, alive, living ಎಂಬ ಶಬ್ದಗಳನ್ನು ಹೇಗೆ ಉಪಯೋಗಿಸಬೇಕು? (೧೨)

೫ Door ಮತ್ತು gate ಎಂಬ ಶಬ್ದಗಳಲ್ಲಿ ಹೆಚ್ಚು ಕಡಿಮೆ ಏನು? (೧೨)

೬ To be ಎಂಬ ಧಾತುವಿನ ನಿಷೇಧರೂಪವನ್ನು ಹೇಗೆ ಮಾಡಬೇಕು?

೭ Reward ಮತ್ತು prize ಎಂಬ ಶಬ್ದಗಳಲ್ಲಿ ಭೇದವೇನು? (೧೬)

೮ News ಮತ್ತು riches ಎಂಬವುಗಳ ಪ್ರಯೋಗವು ಹೇಗೆ? (೧೬)

೯ To have ಎಂಬ ಧಾತುವಿನ ನಿಷೇಧರೂಪವು ಹೇಗಾಗುತ್ತದೆ? (೧೮,೧೯)

೧೦ ರೂಢಿಯೊಳಗಿನ ಭಾಷೆಯಲ್ಲಿ to have ಎಂಬದರ ವರ್ತಮಾನಕಾಲದ ಮುಂಚೆ ಯಾವ ಶಬ್ದವು ಬರುತ್ತದೆ? ಮತ್ತು ಅದರ ಅರ್ಥವೇನಾಗುತ್ತದೆ? (೨೦)

೧೧ ಇಂಗ್ಲಿಷದಿಂದ ಭಾಷಾಂತರ ಮಾಡುವಾಗ ವಿಶೇಷವಾಗಿ ಯಾತರ ಕಡೆಗೆ ಲಕ್ಷ್ಯ ಕೊಡಬೇಕು? (೪)

೧೨ ಪ್ರಶ್ನಾರ್ಥಕ ವಾಕ್ಯದ ರಚನೆ ಹೇಗೆ? (೨೩, ೨೪)

೧೩ ಪ್ರಶ್ನಗಳ ಉಪಯೋಗಗಳು ಯಾವವು? (೨೬)

೧೪ A dish ಎಂಬ ಶಬ್ದದ ಅರ್ಥಗಳು ಯಾವವು? (೨೮)

೧೫ ಪ್ರಶ್ನಾರ್ಥಕ ಸರ್ವನಾಮಗಳು ಯಾವವು? ಅವುಗಳಲ್ಲಿ ಹೆಚ್ಚು-ಕಡಿಮೆ ಏನು? (೩೦, ೩೪)

೧೬ Which man is this? ಮತ್ತು What man is this ಎಂಬ ವಾಕ್ಯಗಳಲ್ಲಿ ಭೇದವೇನು? (೩೫)

೧೭ A sculptor ಮತ್ತು an engraver? (೩೬)

೧೮ Artists ಯಾರಿಗೆ ಅನ್ನಬೇಕು? Artisans ಯಾರಿಗೆ ಅನ್ನಬೇಕು? (೩೬)

೧೯ A carpenter, a joiner? (೩೬)

೨೦ A shoe, a boot ? (೩೬)
೨೧ ಪ್ರಶ್ನಾರ್ಥಕ ಕ್ರಿಯಾವಿಶೇಷಣಗಳು ಯಾವವು ? ಅವು ವಾಕ್ಯದೊಳಗೆ ಎಂಥಲ್ಲಿ ಇರುತ್ತವೆ ? (೩೮, ೩೯).
೨೨ How many ಮತ್ತು how much ಎಂಬವುಗಳಲ್ಲಿ ಭೇದವೇನು? (೪೦)
೨೩ ಊಟಕ್ಕೆ ಇಂಗ್ಲಿಷದಲ್ಲಿ ಮುಖ್ಯವಾದ ಶಬ್ದಗಳು ಯಾವವು ? ಮತ್ತು ಅವುಗಳಲ್ಲಿ ಹೆಚ್ಚು ಕಡಿಮೆ ಏನು ? (೪೦)
೨೪ ಇಂಗ್ಲಿಷದಲ್ಲಿ ಚತುರ್ಥೀ ವಿಭಕ್ತಿ ಹೇಗಾಗುತ್ತದೆ ? (೪೨, ೪೪)
೨೫ ಯಾವ ಕ್ರಿಯಾಪದಗಳ ಮುಂದೆ ವಿಕಲ್ಪವಾಗಿ to ಲೋಪವಾಗುತ್ತದೆ ? (೪೫)
೨೬ Want ಎಂಬ ಶಬ್ದವನ್ನು ಹೇಗೆ ಉಪಯೋಗಿಸಬೇಕು ? ಅದರ ಅರ್ಥವೇನು ? (೪೬)
೨೭ No ಎಂಬ ಶಬ್ದವು ವಿಶೇಷಣ ಯಾವಾಗ ಆಗುತ್ತದೆ ? ಕ್ರಿಯಾವಿಶೇಷಣ ಯಾವಾಗ ಆಗುತ್ತದೆ ? (೨೬)
೨೮ Well, unwell ಎಂಬ ಶಬ್ದಗಳ ಪ್ರಯೋಗವು ಹೇಗೆ ? ಅವು ವಾಕ್ಯದಲ್ಲಿ ಎಂಥಲ್ಲಿರುತ್ತವೆ ? (೧೬)
೨೯ To dress a wound ಅಂದರೇನು ? (೫೩)
೩೦ ಯಾವ ಕ್ರಿಯಾಪದಗಳು ದ್ವಿಕರ್ಮಕ ಅವೆ ? (೫೩)
೩೧ ಇಂಗ್ಲಿಷದಲ್ಲಿ ವಿಶೇಷಣಗಳ ತಾರತಮ್ಯಭಾವವನ್ನು ತೋರಿಸುವ ರೀತಿಗಳು ಯಾವವು ? (೫೪)
೩೨ Than ಎಂಬ ಅವ್ಯಯದ ಮುಂದಿನ ನಾಮಪದವಾಗಲಿ ಸರ್ವನಾಮಪದವಾಗಲಿ ಯಾವ ವಿಭಕ್ತಿಯಲ್ಲಿರಬೇಕು ? (೫೭)
೩೩ ಇಂಗ್ಲಿಷದಲ್ಲಿ Comparative ಮತ್ತು Superlative degree ಗಳು ಹೇಗಾಗುತ್ತವೆ ? (೫೫, ೬೨)
೩೪ ಯಾವ ವಿಶೇಷಣಗಳ ತಾರತಮ್ಯಭಾವ ತೋರಿಸುವ ರೂಪಗಳು ನಿಯಮದಂತೆ ಆಗುವದಿಲ್ಲ ? (೬೩)
೩೫ Old ಎಂಬ ಶಬ್ದ ಹಾಗೂ ಅದರ ತಾರತಮ್ಯಭಾವ ತೋರಿಸುವ ರೂಪಗಳ ಅರ್ಥಗಳನ್ನು ಹೇಳು (೬೪)
೩೬ ವಿಶೇಷಣಗಳಿಂದ ಕ್ರಿಯಾವಿಶೇಷಣಗಳು ಹೇಗಾಗುತ್ತವೆ ? (೬೭)
೩೭ ಕ್ರಿಯಾವಿಶೇಷಣವು ಸಾಧಾರಣವಾಗಿ ವಾಕ್ಯದಲ್ಲಿ ಎಂಥಲ್ಲಿ ಇರುತ್ತದೆ ? (೬೯, ೭೦)
೩೮ ವಾಕ್ಯದಲ್ಲಿ ಅನೇಕ ಕ್ರಿಯಾವಿಶೇಷಣಗಳಿದ್ದರೆ, ಅವುಗಳನ್ನು ಯಾವ ಅನುಕ್ರಮದಿಂದ ಇಡಬೇಕು ? (೭೧)
೩೯ ಯಾವ ಕ್ರಿಯಾವಿಶೇಷಣಗಳು ಬಹುತರವಾಗಿ ಮುಖ್ಯ ಕ್ರಿಯಾಪದದ ಹಿಂದೆ ಬರುತ್ತವೆ ? (೭೩)

೪೦ Enough ಎಂಬ ಶಬ್ದದ ಪ್ರಯೋಗವು ಹೇಗೆ ? (೭೪)

೪೧ So ಎಂಬದು ದರ್ಶಕಸರ್ವನಾಮವೂ ಕ್ರಿಯಾವಿಶೇಷಣವೂ ಆಗುತ್ತದಷ್ಟೇ. ಇದನ್ನು ಉದಾಹರಣಗಳಿಂದ ಸ್ಪಷ್ಟೀಕರಿಸು. (ಕಲಮು ೭೬, ಕನ್ನಡ ವಾಕ್ಯಗಳ-೨೧ ಇವುಗಳ ಭಾಷಾಂತರ ಮಾಡಿ ಹೇಳು).

೪೨ ಕ್ರಿಯಾವಿಶೇಷಣಗಳ ತಾರತಮ್ಯಭಾವ ತೋರಿಸುವ ರೀತಿಗಳು ಯಾವವು ? (೭೭, ೭೮) ಯಾವ ಕ್ರಿಯಾವಿಶೇಷಣಗಳ ರೂಪಗಳು ನಿಯಮದಂತೆ ಆಗುವದಿಲ್ಲ ? (೭೯)

೪೩ Near ಎಂಬದು ವಿಶೇಷಣ ಯಾವಾಗ ಆಗುತ್ತದೆ ? ಆಗ ಅದರ ಪ್ರಯೋಗವು ಹೇಗೆ ? (೭೮)

೪೪ Write, do write, you write ಈ ವಿಧ್ಯರ್ಥದ ರೂಪಗಳಲ್ಲಿ ಭೇದವೇನು ? (೮೨) ಇವುಗಳ ಹೊರ್ತು ಬೇರೆ ವಿಧ್ಯರ್ಥಕ ರೂಪಗಳು ಯಾವವು ? (೮೪)

೪೫ To do ಎಂಬ ಸಹಾಯ ಕ್ರಿಯಾಪದವು ಆವಶ್ಯಕತೆಯನ್ನಾಗಲಿ ಖಂಡಿತವನ್ನಾಗಲಿ ಯಾವಾಗ ತೋರಿಸುತ್ತದೆ ? (೮೩)

೪೬ ವಿಧ್ಯರ್ಥದ ಅರ್ಥವನ್ನು ಹೇಳುವ ಬೇರೆ ರೀತಿಗಳು ಯಾವವು ? (೮೫, ೮೬)

೪೭ So many, so much ಇವುಗಳ ಭೇದವೇನು ? [So Many=ಇಷ್ಟು (ಸಂಖ್ಯಾವಾಚಕ). So much=ಇಷ್ಟು (ಪರಿಮಾಣವಾಚಕ)]

೪೮ Madam ಎಂಬ ಶಬ್ದವನ್ನು ಯಾವ ಸ್ತ್ರೀಯರಿಗೆ ಹಚ್ಚುತ್ತಾರೆ ? (೯೦)

೪೯ Strong Conjugation ಮತ್ತು Weak Conjugation ಗಳೆಂದರೇನು ? (೯೨, ೧೦೦)

೫೦ Ed ಎಂಬದರ ಉಚ್ಚಾರದ ಬಗ್ಗೆ ನಿಯಮಗಳು ಯಾವವು? (೯೨)

೫೧ To study ಎಂಬ ಕ್ರಿಯಾಪದವನ್ನು ಭೂತಕಾಲದಲ್ಲಿ ನಡಿಸು. (೯೪)

೫೨ ಭೂತಕಾಲದ ನಿಷೇಧರೂಪ ಹೇಗಾಗುತ್ತದೆ ? (೯೬)

೫೩ ಇಂಗ್ಲಿಷದಲ್ಲಿ ಕ್ರಿಯಾವಿಶೇಷಣವು ಯಾತ ಯಾತಕ್ಕೆ ಸಂಬಂಧಿಸಿರುತ್ತದೆ ? (೯೭)

೫೪ To discover ಮತ್ತು to invent ಎಂಬ ಶಬ್ದಗಳಲ್ಲಿ ಭೇದವೇನು ? (೯೮)

೫೫ To finish, To confess, To contradict, Altogether ಎಂಬ ಶಬ್ದಗಳಲ್ಲಿ ಯಾವ ಯಾವ ಅವಯವಗಳ ಮೇಲೆ ಸ್ವರಾಘಾತ ಉಂಟು? (೯೮)

೫೬ ಇಂಗ್ಲಿಷದಲ್ಲಿ ಒಟ್ಟಿಗೆ ಕ್ರಿಯಾಪದಗಳೆಷ್ಟು ? ಅವುಗಳಲ್ಲಿ Strong Conjugation ದವು ಎಷ್ಟು ? (೯೨, ೧೦೦)

೫೭ To go ಎಂಬ ಕ್ರಿಯಾಪದವನ್ನು ಭೂತಕಾಲದಲ್ಲಿ ನಡಿಸು. (೧೦೦)

೫೮ Drink, fly, fight, cut, flee, build, mow, hang ತೂಗಾಡು, hang (ಗಲ್ಲಿಗೆ ಹಾಕು), lie (ಸುಳ್ಳು ಹೇಳು), lie (ಬೀಳು), lay (ಇಡು) ಎಂಬ ಕ್ರಿಯಾಪದಗಳ ಭೂತಕಾಲಗಳನ್ನೂ ಭೂತಕೃದ್ವಾಚಕಗಳನ್ನೂ ಹೇಳು. (೧೦೨)

೫೯ ಆ ಮನುಷ್ಯರೆಲ್ಲರು, ಇಷ್ಟು ಜಾಣ ಮನುಷ್ಯ, ಇಂಥ ಜಾಣ ಮನುಷ್ಯ ಎಂಬವುಗಳ ಭಾಷಾಂತರ ಮಾಡು (೧೦೪)

೬೦ ಪೂರ್ಣವರ್ತಮಾನಕಾಲದ ಭಾಷಾಂತರವು ಯಾವಾಗಲೂ ಅದೇ ಕಾಲದಲ್ಲಿ ಆಗುತ್ತದೋ ? (೧೦೬)

೬೧ From ಮತ್ತು since ಎಂಬ ಅವ್ಯಯಗಳಲ್ಲಿ ಭೇದವೇನು? (೧೧೧,೧೧೨)

೬೨ In ಮತ್ತು into ? (೧೧೩) ,, (೧೧೩)

೬೩ Later, latter ? Latest, last ? ,, (೧೧೪)

೬೪ Late ಎಂಬ ಕ್ರಿಯಾವಿಶೇಷಣದ ಉದಾಹರಣೆ ಹೇಳು. (೧೧೪)

೬೫ ಎಷ್ಟು ಎತ್ತರ ಪುರುಷನು ಎಂಬದರ ಇಂಗ್ಲಿಷ ಮಾಡು. (೧೧೫)

೬೬ To ಮತ್ತು for ಎಂಬ ಅವ್ಯಯಗಳಿಂದ ಚತುರ್ಥೀ ವಿಭಕ್ತಿಯ ಹೊರ್ತು ಆಗುವ ಬೇರೆ ಕೆಲವು ಅರ್ಥಗಳನ್ನು ಹೇಳು. (೧೧೬)

೬೭ ಸಪ್ತಮಿಯ ಅರ್ಥವಿರಲಾಗಿ ವೇಳೆಯ ಬೇರೆ ಬೇರೆ ವಿಭಾಗಗಳ ಹಿಂದೆ ಯಾವ ಯಾವ ಉಪಸರ್ಗಾವ್ಯಯಗಳನ್ನು ಹಾಕಬೇಕು ? (೧೧೮)

೬೮ Of ಎಂಬದರ ಅರ್ಥ 'ಎಂಬ' ಎಂತ ಯಾವಾಗ ಆಗುತ್ತದೆ ? (೧೧೯)

೬೯ A church ಮತ್ತು temple ಇವುಗಳಲ್ಲಿ ಭೇದವೇನು ? (೧೨೦)

೭೦ A house, a home ? ಅವನು ಮನೆಯಲ್ಲಿದ್ದಾನೆ, ಅವನು ಮನೆಗೆ ಹೋದನು, ಅವನು ನನ್ನ ಮನೆಯಲ್ಲಿದ್ದಾನೆ ಎಂಬ ವಾಕ್ಯಗಳನ್ನು ಇಂಗ್ಲಿಷದಲ್ಲಿ ಭಾಷಾಂತರ ಮಾಡು. (೧೨೦)

೭೧ ವಾರದ ದಿವಸಗಳ ಹೆಸರುಗಳನ್ನು ಇಂಗ್ಲಿಷದಲ್ಲಿ ಹೇಳು. (೧೨೦)

೭೨ On, upon, above, over ಎಂಬ ಶಬ್ದಗಳ ಅರ್ಥಗಳನ್ನು ಉದಾಹರಣಗಳ ಸಹಿತವಾಗಿ ಹೇಳು. (೧೨೩)

[ ಈ ಪ್ರಕಾರ ಉಳಿದ ಯಾವತ್ತು ಉಪಸರ್ಗಾವ್ಯಯಗಳ ಅರ್ಥಗಳನ್ನು ಶಿಕ್ಷಕನು ಕೇಳಬೇಕು. ] (೧೨೪, ೧೨೬)

೭೩ ಅಧಿಕಾರ ನಡಿಸು, ವ್ಯಾಯಾಮ ಮಾಡು, ಎಂಬವುಗಳ ಭಾಷಾಂತರ ಮಾಡು. (೧೩೭)

೭೪ People ಎಂಬ ಶಬ್ದದ ಬಹುವಚನವನ್ನು ಯಾವಾಗ ಉಪಯೋಗಿಸಬೇಕು ? (೧೩೮)

೭೫ Tall ಮತ್ತು high ಎಂಬ ಶಬ್ದಗಳಲ್ಲಿ ಭೇದವೇನು ? (೧೩೮)
೭೬ There ಎಂಬ ಶಬ್ದವು ವಾಕ್ಯದ ಆರಂಭದಲ್ಲಿ ಯಾವಾಗ ಬರುತ್ತದೆ ? ಅಗ್ಗ ಅದರ ಅರ್ಥಗಳೇನಾಗುತ್ತವೆ ? (೧೩೯, ೧೪೦, ೧೪೧)
೭೭ Passive Voice ಅಂದರೇನು ? ಇಂಗ್ಲಿಷದಲ್ಲಿ ಕರ್ತರೀ ಪ್ರಯೋಗದಿಂದ ಕರ್ಮಣೀ ಪ್ರಯೋಗ ಹೇಗೆ ಮಾಡಬೇಕು ? (೧೧೪)
೭೮ ಇಂಗ್ಲಿಷ ತಿಂಗಳುಗಳ ಹೆಸರುಗಳನ್ನು ಹೇಳು. (೧೪೬)
೭೯ ಕನ್ನಡ ಕರ್ತರೀ ಪ್ರಯೋಗದ ಭಾಷಾಂತರ ಹೇಗೆ ಮಾಡಬೇಕು ? ಕರ್ಮಣಿ ಪ್ರಯೋಗದ ಭಾಷಾಂತರ ಹೇಗೆ ಮಾಡಬೇಕು ? ಭಾವಕರ್ತೃಕ ಪ್ರಯೋಗದ್ದು ಹೇಗೆ ? (೧೪೭, ೧೪೯)
೮೦ Sorrow ಮತ್ತು Pain ಎಂಬ ಶಬ್ದಗಳಲ್ಲಿ ಭೇದವೇನು ? (೧೫೦)
೮೧ A pillow ಮತ್ತು a cushion ? „ (೧೫೭)
೮೨ Instinct ಮತ್ತು reason ಇವುಗಳಲ್ಲಿ ಹೆಚ್ಚು ಕಡಿಮೆ ಏನು ? (೬೧)
೮೩ Bold ಎಂಬ ಶಬ್ದದ ಅರ್ಥದ ಬಗ್ಗೆ ಏನು ಗೊತ್ತಿದೆ ? (೬೧)
೮೪ To do, to make, pains, trouble, to refuse. to deny, a fault, an offence, a crime, a blame, a guilt ಎಂಬ ಶಬ್ದಗಳ ಭೇದವೇನು ?
೮೫ To forgive, to pardon, freedom, liberty ಎಂಬವುಗಳಲ್ಲಿ ಹೆಚ್ಚು ಕಡಿಮೆ ಏನು ? (೪೬)
೮೬ Earth, world, theft, robbery, murder. massacre ಎಂಬವುಗಳಲ್ಲಿ ಭೇದವೇನು ? (೬೦, ೮೭, ೧೪೫)
೮೭ ಕ್ರಿಯಾಪದಗಳ ಮುಂದೆ ಉಪಸರ್ಗಾವ್ಯಯಗಳು ಬಂದರೆ, ಆ ಕ್ರಿಯಾಪದಗಳ ಅರ್ಥಗಳು ತೀರ ಭಿನ್ನವಾಗುವಂಥ ಐದು ಉದಾಹರಣೆಗಳನ್ನು ಕೊಡು. (೧೧೭)
೮೮ Character ಎಂಬದಕ್ಕೆ ಯಾವ ಯಾವ ಅರ್ಥಗಳುಂಟು ? (೮೧೪)
೮೯ To call ಎಂಬ ಕ್ರಿಯಾಪದವನ್ನು ಕರ್ಮಣಿ ಪ್ರಯೋಗ, ಸಂಭವಾರ್ಥ, ಅಪೂರ್ಣ ವರ್ತಮಾನಕಾಲದಲ್ಲಿ ನಡೆಸು.
೯೦ Impersonal construction 'ಅಕರ್ತೃಕ ವಾಕ್ಯರಚನೆ' ಅಂದರೇನು?

— ಸಂಪೂರ್ಣ. —

